# ಅನುಕ್ರಮಣಿಕೆ





ಗೌರೀಶ ಗ್ರಂಥ ಪ್ರಕಟನಾಲಯ, ಧಾರವಾಡ

ಹೊಸ ಅಭ್ಯಾಸಪತ್ರಿಕೆಯಂತೆ ಬರೆದ

# ಕನ್ನಡ ಚೆನ್ನುಡಿ

( ಸಚಿತ್ರ ವ್ಯಾಕರಣ )

ಪ್ರಾಥಮಿಕ ಶಾಲೆಯ

**೪ನೆಯ ತರಗತಿಗೆ**

ಬರೆದವರು:

**ಪ್ರೊ. ಶಿ. ಶಿ. ಬಸವನಾಳ, ಎಮ್. ಎ.**

**ಪಂಡಿತ ಚೆ. ಎ. ಕವಲಿ**

ಪ್ರಕಾಶಕರು:

**ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ, ಧಾರವಾಡ**



**ಐದನೆಯ ಮುದ್ರಣ**

೧೯೫೩ ]　　**ಕಾಪಿರೈಟ್ಸ**　　[ ಬೆಲೆ: ೦-೫-೦

# ಮೊದಲ ಮಾತು

'ಯದ್ಯಪಿ ಬಹುನಾಧೀಷೇ ತಥಾಪಿ ಪಠ ಪುತ್ರವ್ಯಾಕರಣಂ' ಎಂಬುದು ಸಕ್ಕದದ ನುಡಿಯಲ್ಲಿ ನಾಣ್ಣುಡಿಯಂತಿದೆ. ವ್ಯಾಕರಣವನ್ನು ಓದದೆ ಸರಿಯಾಗಿ ಮಾತನಾಡಲು ಬರುವುದಿಲ್ಲ; ಮಾತಿಲ್ಲದಿದ್ದರೆ ಮನುಷ್ಯತ್ವ ಉಳಿಯುವುದಿಲ್ಲ. ವ್ಯಾಕರಣದಿಂದಲೇ ಮೋಕ್ಷ ಸಿಕ್ಕುವುದೆಂದು ಹಿಂದಿನ ಶಾಸ್ತ್ರಕಾರರು ಹಾಡಿ ಕೊಂಡಿದ್ದಾರೆ. ಅದು ಹೋಗಲಿ. ಚೆನ್ನುಡಿಯಿಂದ ಸಂಸಾರ ರಥ ಸರಾಗ ವಾಗಿ ಸಾಗುವುದೆಂಬುದು ಸಕಲರ ಅನುಭವಕ್ಕೆ ಬಂದಿದೆಯಷ್ಟೇ. ಆ ಚೆನ್ನುಡಿ ಯನ್ನೇ ಈ '**ಕನ್ನಡ ಚೆನ್ನುಡಿ**' ಕಲಿಸುವುದು; ಕನ್ನಡ ಕುವರರ ಮಾತಿ ನಲ್ಲಿ ಮೆರುಗನ್ನು ಮೂಡಿಸುವುದು.

ಈ ಬರೆಹದ ಕಾರ್ಯವನ್ನು ಕೈಕೊಂಡಮೇಲೆ ಎರಡು ಮೂರು ಅಭ್ಯಾಸ ಪತ್ರಿಕೆಗಳು ಹೊರಟುವು. ಅವುಗಳಲ್ಲಿಯೂ ಒಂದನ್ನೊಂದು ಹೋಲುವಂತಿಲ್ಲ. ಯಾವುದೊಂದನ್ನೇ ಅಧಿಕರಿಸಿ ಬರೆಯಬೇಕೆಂದರೆ ಆದರಲ್ಲಿ ಅನುಸ್ಯೂತವಾದ ವಿಸ್ತರಣೆಯಿಲ್ಲ; ನಿಷ್ಕೃಷ್ಟವಾದ ಸೂಚನೆ ಸಲಹೆಗಳಿಲ್ಲ. ಹಲವಾರು ಕಡೆ ಗಳಲ್ಲಿ ಸಂದಿಗ್ಧತೆಯ ತೊಡಕಿನಲ್ಲಿ ಸಿಕ್ಕಿಕೊಳ್ಳಬೇಕಾಗುತ್ತಿದ್ದಿತು. ಈ ಎಲ್ಲ ತೊಡಕುಗಳನ್ನು ಬಿಡಿಸಿಕೊಂಡು, ತಳದಿಂದ ತುದಿಯವರೆಗೆ ಎಂದರೆ ಕ್ರಮ ಕ್ರಮವಾಗಿ ಎಲ್ಲ ತರಗತಿಗಳಿಗೆ ಅವೇ ವಿಷಯಗಳನ್ನು ವಿಸ್ತರಿಸುತ್ತ ಕೊನೆ ಮುಟ್ಟಿಸುವ ಪ್ರಯತ್ನವನ್ನು ಮಾಡಿರುವೆವು. ಪ್ರಯತ್ನ ಫಲಕ್ಕೆ ಮುಟ್ಟಿದ ಪ್ರಮಾಣವನ್ನು ಸಹೃದಯರು ನಿರ್ಣಯಿಸಬೇಕು.

ಕನ್ನಡ ಚೆನ್ನುಡಿ ಎಂದೋ ಹುಟ್ಟಿದೆ;ಇಂದಿಗೂ ಸಾಗಿದೆ; ಮುಂದೆಯೂ ಸಾಗತಕ್ಕುದೇ. ಆದರೆ ಅಂದಿನಿಂದ ಇಂದಿನ ವರೆಗೆ ಒಂದೇ ರೀತಿಯಾಗಿ ಬಂದಿಲ್ಲ; ಹಲವಾರು ಮಾರ್ಪಾಡುಗಳನ್ನು ಹೊಂದಿದೆ, ಹೊಂದುತ್ತಲಿದೆ. ಈ ಮಾರ್ಪಾಟುಗಳಿಗೆ ತಕ್ಕಂತೆ ಬೇರೆ ಬೇರೆ ವ್ಯಾಕರಣಗಳು ಹುಟ್ಟಲೇಬೇಕೆಂ ಬುದು ಅರ್ಥಾತ್ ಸಿದ್ಧ! ಆದರೆ ಈ ವರೆಗೆ ಸಶಾಸ್ತ್ರೀಯವಾಗಿ ಬರೆದ ವ್ಯಾಕ ರಣ ಶಾಸ್ತ್ರಗಳು ಸಿಕ್ಕುವುದೆಂದರೆ? ಎರಡೇ ಎರಡು: ಒಂದು ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದ ಶಬ್ದಮಣಿ ದರ್ಪಣ; ಇನ್ನೊಂದು, ಹದಿನೇಳನೆಯ ಶತಮಾನದಲ್ಲಿ ಹುಟ್ಟಿದ ಶಬ್ದಾನುಶಾಸನ. ಅಲ್ಲಿಂದಿಲ್ಲಿಯ ವರೆಗೆ ಅಥವಾ

ಕಳೆದ ಐವ್ವತ್ತು ವರ್ಷಗಳಲ್ಲಿ ಕೆಲವು ವ್ಯಾಕರಣಗಳು ಹುಟ್ಟಿವೆ; ಆದರೆ ಅವೆಲ್ಲ ಆ ಶಾಸ್ತ್ರಗಳ ಮರಿಗಳು; ಆ ಶಾಸ್ತ್ರ ವಿಷಯವನ್ನೇ ಸುಲಭ ಗದ್ಯದಲ್ಲಿ—ಸ್ವಲ್ಪದರಲ್ಲಿ— ತರುವ ಪ್ರಯತ್ನಗಳು ಮಾತ್ರ! ಬೆಳೆಯುತ್ತಿರುವ ಭಾಷೆಗೆ, ಬದಲಾಗುತ್ತಿರುವ ಕನ್ನಡ ನುಡಿಗೆ ಕಟ್ಟು ನಿಟ್ಟುಗಳು ಕಾಣುವುದಿಲ್ಲ ಅವುಗಳಲ್ಲಿ. ಆದರೆ ಆ ಮಾರ್ಪಾಟುಗಳು ಒಮ್ಮೆ ಭಾಷೆಯಲ್ಲಿ—ಬಲ್ಲಿದರ ಭಾಷೆಯಲ್ಲಿ—ಬಂದು ಹೋಗಿವೆ. ಎಂದಮೇಲೆ 'ಸ್ಥಿತಸ್ಯ ಗತಿಃ ಕಲ್ಪನೀಯಾ' ಎಂದು ಬಂದುದಕ್ಕೆ ಹೊಸ ಹಾದಿಯನ್ನು ಕಲ್ಪಿಸಿಕೊಳ್ಳಲೇಬೇಕು.

ಈ ನಮ್ಮ ಕನ್ನಡ ಚೆನ್ನುಡಿಯ ಮುಂದಿನ ಭಾಗಗಳಲ್ಲಿ ಆ ಬಗೆಯ ಕೆಲವು ಹೊಸ ಸಮಸ್ಯೆಗಳನ್ನು ಎತ್ತಿಕೊಂಡಿದ್ದೇವೆ; ತರ್ಕಬದ್ಧ ರೀತಿಯಲ್ಲಿ ಅವುಗಳನ್ನು ಬಿಡಿಸಲೂ ಪ್ರಯತ್ನಿಸಿದ್ದೇವೆ. ಆದರೆ 'ಇದಮಿತ್ಥಂ' ಎಂದು ಹೇಳುವ ಹುಚ್ಚು ಹಟ ನಮಗಿಲ್ಲ. ಸಹೃದಯ ವಿದ್ವಾಂಸರ ಪ್ರಾಮಾಣಿಕ ವಿಮರ್ಶೆಗಾಗಿ ಅವಕಾಶವನ್ನು ಕಲ್ಪಿಸಿ ಕೊಟ್ಟಿದ್ದೇವೆ

೧೯೪೯ನೆಯ ಅಭ್ಯಾಸ ಪತ್ರಿಕೆಯಲ್ಲಿ ನಾಲ್ಕನೆಯ ತರಗತಿಯ ವ್ಯಾಕರಣ ವಿಚಾರವಿಲ್ಲ ಆದರೆ, ೫ನೆಯ ತರಗತಿಯ ವ್ಯಾಕರಣ ವಿಷಯಕ್ಕೆ ತಳಹದಿಯಾಗಿ ೪ನೆಯ ತರಗತಿಯಲ್ಲಿ ಬರಬೇಕಾದ ವಿಷಯಗಳನ್ನು ಹೊಂದಿಸಿ ಈ 'ವ್ಯಾಕರಣ ಪ್ರವೇಶಿಕೆ'ಯಲ್ಲಿ ಬರೆದಿದೆ. ಸ್ಕಾಲರಶಿಪ್ ಪರೀಕ್ಷೆಯ ಪ್ರಶ್ನೆಗಳನ್ನು ನೋಡಿದರೆ ಈ ಮಾತಿನ ಸತ್ಯತೆ ಹೊಳೆಯುವುದು.

ಈ ಹೊತ್ತಗೆಗಳನ್ನು ಬರೆಯುವಾಗ—ಸಾಧ್ಯವಾದ ಮಟ್ಟಿಗೂ ಆಧುನಾತನ ಶಿಕ್ಷಣ ಪದ್ಧತಿಯನ್ನು ಪೂರಾ ಅನುಸರಿಸಲು ಪ್ರಯತ್ನಿಸಿದ್ದೇವೆ. ಶಿಕ್ಷಣವೆಂದರೆ ಕಲಿಸುವುದಲ್ಲ, ಕಲಿಯುವುದು; ಅದು ಕೂಡ ಸಾಮಾನ್ಯದಿಂದ ವಿಶೇಷವನ್ನು ಕಂಡು ಹಿಡಿಯುವ ಪ್ರಯತ್ನದಿಂದ ಪ್ರಶ್ನ ಪದ್ಧತಿಯೇ ಇದಕ್ಕೆ ಸರಿಯಾದ ದಾರಿದೀವಟಿಗೆ. ಈ ಎಲ್ಲ ವಿಚಾರಗಳನ್ನು ಮುಂದಿಟ್ಟುಕೊಂಡೇ 'ಕನ್ನಡ ಚೆನ್ನುಡಿ'ಬರೆದಿದೆ. ಬಾಲಕರ ವಯೋಮಾನಕ್ಕೆತಕ್ಕಂತೆ ಭಾಷೆಯು ಸರಲವೂ ಸುಗಮವೂ ಆಗುವಂತೆ ಲಕ್ಷಕೊಟ್ಟಿದೆ. ಪಾಠಗಳಲ್ಲಿ ತಕ್ಕಂತೆ ಚಿತ್ರಗಳನ್ನು ಸೇರಿಸಿದೆ ಈ ದೃಷ್ಟಿಯಿಂದ ಕಲಿಸುವ ಗುರುಗಳಿಗೂ ಕಲಿಯುವ ವಿದ್ಯಾರ್ಥಿಗಳಿಗೂ ಬಹಳ ನೆರವಾದೀತೆಂದು ನಂಬಿಗೆ; ಇಷ್ಟೇ ಅಲ್ಲ, ವಿದ್ಯಾರ್ಥಿಗಳೇ ಸ್ವಪ್ರಯತ್ನದಿಂದ ಇವುಗಳಲ್ಲಿಯ ವಿಷಯಗಳನ್ನು ತಿಳಿದುಕೊಳ್ಳುವಷ್ಟು

ಸುಲಭವಾದ ರೀತಿಯಲ್ಲಿ ಬರೆಯಲಾಗಿದೆ. ಓದುಗರು ಅದರ ಸದುಪಯೋಗ ವನ್ನು ಮಾಡಿಕೊಳ್ಳಬೇಕು.

ಈ ಪ್ರಯತ್ನಗಳಲ್ಲಿ, ಮಾನವನೆ ಮತಿಗಿರಬಹುದಾದ ಭ್ರಮಾ ಪ್ರಮಾದಗಳ ಪರಿಣಾಮವಾಗಿ ಕೆಲವು ಕುಂದು ಕೊರತೆಗಳು ಕಾಣಬಹುದು. ಸಹೃದಯರು ಸೂಕ್ತ ಸಲಹೆಗಳನ್ನು ಕೊಟ್ಟರೆ ಸಾನಂದದಿಂದ ಸ್ವಾಗತಿಸು ವೆವು; ಮುಂದಿನ ಮುದ್ರಣದಲ್ಲಿ ಸರಿಪಡಿಸುವೆವು

ಕೊನೆಯದಾಗಿ — ಕನ್ನಡ ಚೆನ್ನುಡಿಯನ್ನು ಬರೆಸಿ ಬೆಳಕಿಗೆ ತಂದ ಪ್ರಕಾಶಕರು ಶ್ರೀ ಶಂ ಶಿ ಕುಲಕರಣಿ ಅವರಿಗೂ ಬರೆಯುವಾಗ ಕಾಲ ಕಾಲಕ್ಕೆ ಸೂಕ್ತ ಸಲಹೆಗಳನ್ನು ಕೊಟ್ಟು ಸಹಕರಿಸಿದವರಲ್ಲಿ ಶ್ರೀ. ವೀ ರು. ಕೊಪ್ಪಳ, ಎಮ್. ಎ, ಬಿ. ಟಿ. (ಧಾರವಾಡ ಆರ್. ಎಲ್. ಎಸ್. ಹೈಸ್ಕೂ ಲಿನ ಪ್ರಧಾನ ಶಿಕ್ಷಕರು) ಅವರಿಂದಲೂ ಮತ್ತೆ ಕೆಲವು ಜನ ವ್ಯಾವಸಾಯಿಕ ಮಿತ್ರರಿಂದಲೂ ಅತ್ಯಂತ ಉಪಕೃತರಾಗಿರುವೆವು ಎಲ್ಲರಿಗೂ ಧನ್ಯವಾದಗಳು.

ಧಾರವಾಡ
೨೦–೧–೧೯೫೦

— ಲೇಖಕರು

ಮುದ್ರಕರು. ಎಮ್. ಜಿ. ಪಾಲೇಕರ ವಸಂತ ಮುದ್ರಣಾಲಯ, ಧಾರವಾಡ.

# ಕನ್ನಡ ಚೆನ್ನುಡಿ

## ೪ನೆಯ ತರಗತಿಗೆ

## ಮೊದಲ ಮಾತು

ಗುಂಪು ಕಟ್ಟಿಕೊಂಡಿರುವುದು ಪ್ರಾಣಿಗಳ ಹುಟ್ಟುಗುಣ. ಆ ಗುಂಪು ಒಡೆಯದೆ ಇರಬೇಕಾದರೆ ಒಂದು ಮತ್ತೊಂದರ ಮನಸ್ಸಿಗೆ ಸಂತೋಷವಾಗುವಂತೆ ನಡೆಯಬೇಕಾಗುತ್ತದೆ. ಹಾಗೆ ನಡಕೊಳ್ಳಬೇಕಾದರೆ ಒಂದರ ಮನಸ್ಸಿನಲ್ಲಿದ್ದುದು ಮತ್ತೊಂದಕ್ಕೆ ಪೂರಾ ತಿಳಿಯಬೇಕಾಗುತ್ತಿದೆ. ಕಾಗೆ ಒಂದಗುಳ ಕಂಡಾಗ 'ಕಾ ಕಾ' ಎಂದು ಒದರುತ್ತಿದೆ. ಅದನ್ನು ಕೇಳಿದ ಉಳಿದ ಕಾಗೆಗಳು ಅಲ್ಲಿಗೆ ಬರುತ್ತಿವೆ. ಇದರಿಂದ ಗುಂಪು ಮತ್ತಿಷ್ಟು ದೊಡ್ಡದಾಗುತ್ತಿದೆ. ಹೀಗೆಯೇ ಎಲ್ಲ ಪಕ್ಷಿಗಳೂ ಪ್ರಾಣಿಗಳೂ ಬೇರೆ ಬೇರೆ ದನಿಗಳಿಂದ ತಮ್ಮ ಮನಸ್ಸಿನಲ್ಲಿದ್ದುದನ್ನು ಬೇರೆಯವಕ್ಕೆ ತಿಳಿಸುತ್ತವೆ. ಆದರೆ, ಇವುಗಳ ದನಿಗಳು ನಮ್ಮ ದನಿ(ಮಾತು)ಗಳಂತೆ ತಿಳಿಯಾಗಿಲ್ಲ, ತಿಳಿಯುವದಿಲ್ಲ.

ಮನುಷ್ಯನಾದರೂ ಈ ಪ್ರಾಣಿಗಳ ಗುಂಪಿಗೇ ಸೇರಿದವ; ಆದರೆ ಎಲ್ಲ ಜೀವಿಗಳಿಗಿಂತ ಬುದ್ಧಿವಂತ. ಈ ಬುದ್ಧಿಯ ಒಲದಿಂದ ಆವನು ಮಾತುಗಳನ್ನು ಗೊತ್ತುಮಾಡಿಕೊಂಡ. ಈ ಕಾರಣಗಳಿಂದಲೇ ಮನುಷ್ಯರ ಗುಂಪು ಉಳಿದೆಲ್ಲ ಪ್ರಾಣಿಗಳ ಗುಂಪುಗಳಿಗಿಂತ ದಿನದಿನಕ್ಕೆ ಬೆಳೆಯುತ್ತಲಿದೆ.

ಒಬ್ಬರ ಮನದಲ್ಲಿದ್ದುದು ಮತ್ತೊಬ್ಬರಿಗೆ ಪೂರಾ ತಿಳಿಯಬೇಕಾದರೆ ಮಾತು ಹೆಗುರಾದ ಹಾದಿ. ಮಾತು ಮಾತ್ರ ತಿಳಿಯುವಂತಿರಬೇಕು. ಇದು ಕಲಿಯದೆ ಬರುವುದಿಲ್ಲ. ಮಾತಿಗೆ ಮತ್ತೊಂದು ಹೆಸರು ನುಡಿ. ಒಳ್ಳೆಯ ನುಡಿ ಚೆನ್ನುಡಿ. ನಮ್ಮ ನುಡಿ ಕನ್ನಡ. ಈ ಕನ್ನಡದ ಚೆನ್ನುಡಿಯನ್ನು ಹೇಗೆ ಕಲಿಯಬೇಕು ಎಂಬುದನ್ನು ಈ **ಕನ್ನಡ ಚೆನ್ನುಡಿ**ಯಲ್ಲಿ ಕನ್ನಡಿಸಿದೆ. ಈ ಚೆನ್ನುಡಿಯೇ ವ್ಯಾಕರಣ.

**ಕೇಳಿಕೆ**

೧. ಪ್ರಾಣಿಗಳ ಹುಟ್ಟುಗುಣ ಯಾವುದು ?
೨. ಅವು ತಮ್ಮ ಗುಂಪುಗಳನ್ನು ಹೇಗೆ ಕಾಯ್ದುಕೊಳ್ಳುತ್ತಿವೆ ?
೩. ಮನುಷ್ಯನಿಗೂ ಉಳಿದ ಪ್ರಾಣಿಗಳಿಗೂ ಭೇದವೇನು ?
೪. ಮಾತು ಹೇಗಿರಬೇಕು ?
೫ ಕನ್ನಡ ಚೆನ್ನುಡಿಯನ್ನು ಏಕೆ ಕಲಿಯಬೇಕು ?

# ೧ನೆಯ ಪಾಠ

# ಮಾತು ಎಂದರೇನು ?

## ವಾಕ್ಯ—ಪರಿಚ್ಛೇದ

ಮಾತು ಎಂದರೇನು ? ಮನುಷ್ಯನು ತನ್ನ ಮನಸ್ಸಿನಲ್ಲಿದ್ದುದನ್ನು ಮತ್ತೊಬ್ಬನಿಗೆ ತನ್ನ ದನಿಯಿಂದ ತಿಳಿಸುವ ರೀತಿಯೇ ಮಾತು.

(೧) ಸೂರ್ಯ ಮೂಡಿದನು. (೨) ಹೊತ್ತು ಏರುತ್ತಿದೆ. (೩) ನಾಲೆಯ ಬಾಗಿಲು ತೆರೆಯುವುವು. (೪) ಮಕ್ಕಳೇ, ನಾಲೆಗೆ ಹೋಗಲು ಹೊತ್ತಾಗುವುದಿಲ್ಲವೇ ? (೫) ಬೇಗನೆ ಏಳಿರಿ. (೬) ನಾಲೆಗೆ ತಡಮಾಡಬೇಡಿರಿ.

ಮೇಲೆ ಬರೆದಿರುವುದನ್ನು ಸರಿಯಾಗಿ ಓದಿರಿ. ಏನಾದರೂ ತಿಳಿಯುತ್ತಿದೆಯೇ ? ಇವೆಲ್ಲ ಮಾತುಗಳು. ಒಂದನೆಯ ಮಾತಿನಲ್ಲಿ ಯಾವನು ಏನು ಮಾಡಿದನು, ಎರಡನೆಯ ಮಾತಿನಲ್ಲಿ ಯಾವುದು ಏನು ಮಾಡುತ್ತಿದೆ. ಎಂಬುದನ್ನು ತಿಳಿಯುವಂತೆ ಹೇಳಿದೆ. ಇದರಂತೆ ಉಳಿದ ಮಾತುಗಳ ಬಗೆಗೂ ತಿಳಿಸಿ ಹೇಳಿರಿ.

ಮೇಲಿನ ಮಾತುಗಳಲ್ಲಿ ಒಂದೊಂದು ಮಾತು ಬೇರೆ ಬೇರೆ ವಿಚಾರವನ್ನು ತಿಳಿಸುತ್ತದೆ. ಒಟ್ಟುಗೂಡಿಸಿ ನೋಡಿದರೆ, ಸೂರ್ಯ ಮೂಡುವ ಹೊತ್ತಿಗೆ ಮನೆಯ ಹಿರಿಯ ತನ್ನ ಮಕ್ಕಳೊಡನೆ ಮಾತನಾಡಿದುದು ಹೊಳೆಯುತ್ತಿದೆ.

ಇಂತಹ ಹಲವಾರು ಮಾತುಗಳನ್ನು ನಾವು ಆಡುತ್ತೇವೆ, ಹೆರವರು ಆಡುವುದನ್ನು ಕೇಳುತ್ತೇವೆ; ಒಮ್ಮೊಮ್ಮೆ ಇವೇ ಮಾತುಗಳನ್ನು ಬರೆದು ಬೇರೆಯವರಿಗೆ ತಿಳಿಸುತ್ತೇವೆ; ಬೇರೆಯವರು ಬರೆದಿದ್ದರೆ ನಾವು ತಿಳಿದುಕೊಳ್ಳುತ್ತೇವೆ. ಈ ಬರೆಹದಿಂದಲೂ ಒಬ್ಬರ ಮನಸ್ಸಿನಲ್ಲಿದ್ದುದು ಮತ್ತೊಬ್ಬ

**(೧) ಮನುಷ್ಯನು ತನ್ನ ಮನಸ್ಸಿನಲ್ಲಿದ್ದುದನ್ನು ಮತ್ತೊಬ್ಬರಿಗೆ ತನ್ನ ನುಡಿಯಿಂದ ಇಲ್ಲವೆ ಬರೆಹದಿಂದ ತಿಳಿಸುವ ರೀತಿಗೆ ಮಾತು ಎನ್ನುವರು.**

ಈಗ ಮತ್ತೊಂದು ಪಾಠನ್ನು ನೋಡುವ:—



ಬೇಸಗೆ ಬಲವಾಗಿದ್ದಿತು | ಒಂದು ಕಾಗೆಗೆ ನೀರಡಿಕೆ ಆಗಿತ್ತು |
ಅದಕ್ಕೆ ಒಂದು ಹಿತ್ತಲದಲ್ಲಿ ನೀರಿನ ಹೂಜೆ ಕಂಡಿತು | ಅದರಲ್ಲಿ
ನೀರು ತಳಕ್ಕೆ ಹೋಗಿದ್ದುವು | ಕಾಗೆ ನೀರು ಕುಡಿಯಹೋಯಿತು |
ನೀರು ಬಾಯಿಗೆ ನಿಲುಕಲಿಲ್ಲ | ಆಗ ಕಾಗೆ ಹಂಚಿಕೆ ಹುಡುಕಿತು |
ಒಂದೊಂದೇ ಹರಳನ್ನು ತಂದಿತು | ಅವುಗಳನ್ನು ಹೂಜೆಯಲ್ಲಿ ಚೆಲ್ಲಿತು
ನೀರು ಅಂಚಿಗೆ ಬಂದಿತು | ಕಾಗೆ ನೀರನ್ನು ಕುಡಿಯಿತು |

| ಈ ಗೆರೆಯಿಂದ ಗುರುತಿಸಿದುವೆಲ್ಲ ಒಂದೊಂದು ಬಿಡಿ ಮಾತು. ಅವೆಲ್ಲವೂ ನಿಮಗೆ ತಿಳಿಯುತ್ತಿವೆ. ಒಂದೊಂದು ಬಿಡಿ ಮಾತೂ ಬೇರೆ ಬೇರೆ ವಿಚಾರವನ್ನು ತಿಳಿಸುತ್ತಿದೆ. ಅವೆಲ್ಲವನ್ನು ಕೂಡಿಸಿದರೆ ಒಂದು ಕಾಗೆಯ

**(೨) ಒಂದು ವಿಚಾರವನ್ನು ಪೂರಾ ತಿಳಿಸುವ ಬಿಡಿಮಾತು ವಾಕ್ಯ.**

**(೩) ಒಂದಕ್ಕೊಂದು ಹೊಂದಿಕೊಳ್ಳುವ ಬಿಡಿಮಾತುಗಳ ಅಥವಾ ವಾಕ್ಯಗಳ ಗುಂಪು ಪರಿಚ್ಛೇದ.**

ಮೇಲಿನ ಎರಡು ಪರಿಚ್ಛೇದಗಳಲ್ಲಿ ಮೊದಲನೆಯದರಲ್ಲಿ ಮನೆಯ ಹಿರಿಯನ ಒಂದೊಂದು ವಾಕ್ಯವನ್ನು ಅಂಕೆಗಳಿಂದ ಗುರುತಿಸಿದೆ. ಕಾಗೆಯ ಕತೆಯಲ್ಲಿ | ಈ ಗುರುತಿನಿಂದ ಬಿಡಿಮಾತುಗಳನ್ನು ತೋರಿಸಿದೆ.

## ಬಳಕೆ

(೧) ಕೆಳಗಿನ ಗುಂಪುಗಳಲ್ಲಿಯ ಶಬ್ದಗಳನ್ನು ಆಯ್ದುಕೊಳ್ಳಿರಿ. ಒಂದೊಂದು ವಾಕ್ಯವನ್ನು ಮಾಡಿರಿ.

| | | |
|---|---|---|
| ಮಂಗಗಳು | ನೀರನ್ನು | ಕೊಂದನು. |
| ಬೆಕ್ಕು | ಬಕಾಸುರನನ್ನು | ಹೊಳೆಯುತ್ತಾನೆ. |
| ನದಿ | ಹಣ್ಣುಗಳನ್ನು | ಕೊಡುತ್ತಿದೆ. |
| ಭೀಮ | ಮುಗಿಲಲ್ಲಿ | ಹಿಡಿಯುತ್ತಿದೆ. |
| ಚಂದ್ರ | ಇಲಿಯನ್ನು | ತಿನ್ನುತ್ತಿವೆ. |

(೨) ಮೋಡಗಳು–ಸುರಿಸುತ್ತಿವೆ ಮಳೆಯಿಂದ–ತುಂಬಿ ಹರಿಯುತ್ತಿವೆ. ಆ ನೀರಿನಿಂದ–ಕಾಯಿಪಲ್ಲೆ ಬೆಳೆಯುತ್ತಾರೆ. ಆ ಬೆಳೆಯಿಂದ–ಗಳಿಸುತ್ತಾರೆ. ಈ ಗಳಿಕೆಯಿಂದ–ಆಗುತ್ತಾರೆ.

ಕೆಳಗಿನ ಶಬ್ದಗಳಲ್ಲಿ ತಕ್ಕುದನ್ನು ಆಯ್ದುಕೊಳ್ಳಿರಿ; ಮೇಲಿನ ವಾಕ್ಯಗಳಲ್ಲಿ ತೆರವಿದ್ದಲ್ಲಿ ತುಂಬಿರಿ :

ಹಣವನ್ನು, ಜನರು, ಮಳೆಯನ್ನು, ಸಿರಿವಂತರು, ಹೊಳೆಹಳ್ಳಗಳು

(೩) ಈ ಪರಿಚ್ಛೇದ ಯಾವುದರ ವಿಷಯವಾಗಿದೆ ? ಹೇಳಿರಿ.

## ಕೇಳಿಕೆ

(೪) ವಾಕ್ಯವೆಂದರೇನು ?

(೫) ಪರಿಚ್ಛೇದವೆಂದರೇನು ?

# ೨ನೆಯ ಪಾಠ

## ಪರಿಚ್ಛೇದದ ವಿಚಾರ

(ಅ) ಕೋಗಿಲೆ ಕೂಗುತ್ತಿದೆ. (ಆ) ಭೀಮ ಹೊಸ ಅರಿವೆ ತೊಟ್ಟಿದ್ದಾನೆ. (ಇ) ಚಂದ್ರನಿಂದ ಬೆಳದಿಂಗಳು ಬರುವುದು.

ಮೇಲಿನ ಒಂದೊಂದು ಮಾತನ್ನು ಓದಿರಿ. ಅದರಿಂದ ಏನಾದರೂ ತಿಳಿಯುತ್ತಿದೆಯೇ? ಅಹುದು. ಆದುದರಿಂದ ಅವು ವಾಕ್ಯ. ಆದರೆ, ಅವೆಲ್ಲವನ್ನು ಹೊಂದಿಸಿರಿ. ಏನಾದರೂ ಒಟ್ಟು ಅರ್ಥ ತಿಳಿಯುತ್ತಿದೆಯೇ? ಇಲ್ಲ. ಆದುದರಿಂದ ಕಂಡಕಂಡ ಬಿಡಿಮಾತುಗಳನ್ನು ಹೊಂದಿಸಿ ಪರಿಚ್ಛೇದವನ್ನು ಮಾಡಲಿಕ್ಕೆ ಬರುವುದಿಲ್ಲ.

**(೪) ಕೆಲವು ಬಿಡಿಮಾತುಗಳು ಒಂದಕ್ಕೊಂದು ಹೊಂದುವುದಿಲ್ಲ; ಅಂತಹವುಗಳಿಂದ ಪರಿಚ್ಛೇದವನ್ನು ಮಾಡಲು ಬರುವುದಿಲ್ಲ.**

ಚಂದ್ರನಿಂದ ನಮಗೆ | ಹರಿಗೋಲಿಗೆ ಹುಟ್ಟನ್ನು | ಮರದ ಮೇಲೆ ಹಣ್ಣುಗಳು | ಚಿಟ್ಟನೆ ಚೀರಿತು |

ಮೇಲಿನ ಮಾತುಗಳನ್ನು ಓದಿರಿ. ಇವುಗಳಿಂದ ಯಾವುದೇ ಒಂದು ಅರ್ಥವಾದರೂ ನಿಮಗೆ ಪೂರಾ ತಿಳಿಯುತ್ತಿದೆಯೇ? ಇಲ್ಲ ಆದುದರಿಂದ ಇವು ವಾಕ್ಯಗಳಲ್ಲ.

**(೫) ಯಾವುದೇ ಒಂದು ಅರ್ಥವೂ ಪೂರಾ ತಿಳಿಯದೆ ಇರುವ ಮಾತು ವಾಕ್ಯವಲ್ಲ.**

ವಾಕ್ಯಗಳನ್ನು ಹೊತ್ತಿಗೆಗಳಲ್ಲಿ ಹೇಗೆ ಗುರುತಿಸಬೇಕು ?

ಮನೆಯ ಹಿರಿಯನ ಮಾತಿನಲ್ಲಿ ಅಂಕೆಗಳಿಂದ, ಕಾಗೆಯ ಕತೆಯಲ್ಲಿ | ಈ ಗುರುತಿನಿಂದ ವಾಕ್ಯಗಳನ್ನು ಗುರುತಿಸಿದೆ. ನಿಮ್ಮ ಪುಸ್ತಕಗಳಲ್ಲಿ ವಾಕ್ಯವನ್ನು . ಈ ಸಣ್ಣ ಚುಕ್ಕೆಯಿಂದ ಗುರುತಿಸುತ್ತಾರೆ. ಇದು ಇದ್ದಲ್ಲಿ ತುಸು

(.) ಈ ಗುರುತು ಪೂರ್ಣವಿರಾಮ. ಒಂದೊಂದು ವಾಕ್ಯ ಮುಗಿದಲ್ಲಿ ಪೂರ್ಣವಿರಾಮ ಚಿಹ್ನೆಯನ್ನು ಹಾಕಬೇಕು.

**(೬) ವಾಕ್ಯ ಮುಗಿದುದನ್ನು ಗುರುತಿಸುವ ಚಿಹ್ನಕ್ಕೆ (ಚುಕ್ಕೆಗೆ) ಪೂರ್ಣವಿರಾಮ ಎನ್ನುವರು.**

## ಬಳಕೆ

(೧) ಗೋವಳಗಿತ್ತಿ ಹಾಲಿಗೆ ಹೆಪ್ಪು ಹಾಕಿದ್ದಳು ಪಾತ್ರೆಯ ಬಾಯಿ ತೆರೆದಿತ್ತು ಎರಡು ಇಲಿಗಳು ಆ ಪಾತ್ರೆಯಲ್ಲಿ ಬಿದ್ದುವು ಅವು ಮೇಲೆ ಬರಲು ಹೆಣಗಾಡಿದುವು ಅದು ಆಗಲಿಲ್ಲ ಒಂದು ಇಲಿ ಸುಮ್ಮನೆ ಮುಳುಗಿ ಸತ್ತು ಹೋಯಿತು ಮತ್ತೊಂದು ಇಲಿ ಪಾತ್ರೆಯ ತುಂಬ ಗರಗರ ತಿರುಗಹತ್ತಿತು

ಈ ಕತೆಯಲ್ಲಿ ವಾಕ್ಯದ ಕೊನೆಗೆ ಪೂರ್ಣವಿರಾಮದ ಚಿಹ್ನವನ್ನು ಹಾಕಿರಿ.

(೨) ಕೆಳಗೆ ಬರೆದವುಗಳಲ್ಲಿ ಯಾವುವು ವಾಕ್ಯಗಳಲ್ಲ ಎಂಬುದನ್ನು × ಈ ಚಿಹ್ನದಿಂದ ಗುರುತಿಸಿರಿ.

ಎರಡು ಇಲಿಗಳು ಆ ಪಾತ್ರೆಯಲ್ಲಿ ಬಿದ್ದುವು
ಗರಗರ ತಿರುಗಿತು
ಚಂದ್ರನು ಆಕಾಶದಲ್ಲಿ
ಗಿಳಿಯ ಮೂಗು ಚೂಪಾಗಿ
ಮಲ್ಲಿಗೆಯ ಹೂಗಳು ಅರಳಿವೆ
ಜೋಳವನ್ನು ಬೆಳೆಯುತ್ತಾನೆ
ಆಕಾಶದಲ್ಲಿ ಭೋರೆಂದು ಸಪ್ಪಳು ಮಾಡುತ್ತ
ಬಹಳ ಸೀ

(೩) ಮೇಲಿನ ಮಾತುಗಳಲ್ಲಿ ವಾಕ್ಯಗಳಲ್ಲದವನ್ನು ವಾಕ್ಯಗಳನ್ನು ಮಾಡಿರಿ.

(೪) ಎಂತಹ ಮಾತು ವಾಕ್ಯವೆನಿಸುವದಿಲ್ಲ? ಉದಾಹರಣೆ ಕೊಡಿರಿ.

(೫) ಪರಿಚ್ಛೇದವು ಹೇಗೆ ಆಗುವದು?

(೬) ಚಿಣಿಫಣೀ ಆಟದೊಳಗಿನ ಐದು ವಾಕ್ಯಗಳನ್ನು ಬರೆಯಿರಿ.

(೭) ನೀವು ನೋಡಿದ ಗುಡ್ಡ ಅಥವಾ ಹೊಳೆಯ ಬಗೆಗೆ ಒಂದು ಪರಿಚ್ಛೇದವನ್ನು ಬರೆಯಿರಿ.

---

# ೩ನೆಯ ಪಾಠ

## ಪದ

ನಾವು ಮಾತನಾಡುವಾಗ ಮೊದಲಿನಿಂದ ಕೊನೆಯುವರೆಗೂ ಬಿಡು ವಿಲ್ಲದೆ ಆಡಿದಂತೆ ತೋರುತ್ತಿದೆ ನಡುನಡುವೆ ತಡೆಯುವುದು ಸರಿಯಾಗಿ ತಿಳಿಯುವುದಿಲ್ಲ. ಅದನ್ನೇ ಬರೆದು ನೋಡಿದರೆ ಈ ಮಾತು ಚೆನ್ನಾಗಿ ತಿಳಿ ಯುವದು.

(೧) ಗಾಳಿ | ಬೀಸುತ್ತಿದೆ |
(೨) ಹಾವುಗಾರ | ಹಾವುಗಳನ್ನು ಆಡಿಸುತ್ತಾನೆ |
(೩) ಪರಶುರಾಮ | ಕೊಡಲಿಯಿಂದ | ಕಟ್ಟಿಗೆಗಳನ್ನು | ಕಡಿಯುತ್ತಾನೆ |
(೪) ಹುಡುಗರು | ಸರಿಯಾಗಿ | ಓದಿದರೆ | ಬುದ್ಧಿವಂತರು | ಆಗುತ್ತಾರೆ |

ಮೇಲಿನ ಪ್ರತಿಯೊಂದು ವಾಕ್ಯದಲ್ಲಿಯೂ ಸಣ್ಣ ಸಣ್ಣ ತುಂಡುಗಳನ್ನು ಮಾಡಿದೆ. ಮಾತನಾಡುವಾಗಲೂ ಹೀಗೆಯೇ ತುಂಡುಗಳನ್ನು ಮಾಡುತ್ತೇವೆ.

೧ನೆಯ ಮಾತಿನಲ್ಲಿ ಎರಡು ತುಂಡುಗಳಿವೆ. ೨ನೆಯ ಮಾತಿನಲ್ಲಿ ಮೂರು ತುಂಡುಗಳಿವೆ. ಉಳಿದ ಮಾತುಗಳಲ್ಲಿ ಎಷ್ಟೆಷ್ಟು ತುಂಡುಗಳಿವೆ, ಹೇಳಿರಿ.

**(೭) ಒಂದು ಮಾತಿನಲ್ಲಿ ಎರಡು ಅಥವಾ ಹೆಚ್ಚು ತುಂಡುಗಳಿರುತ್ತವೆ.**

ಮಳೆ ಬರುತ್ತಿದೆ. ಕೃಷ್ಣ ಕಂಸನನ್ನು ಕೊಂದನು. ನಾನು ಲೆಕ್ಕಣಿಕೆಯಿಂದ ಕತೆಯನ್ನು ಬರೆಯುತ್ತೇನೆ.

ಈ ವಾಕ್ಯಗಳಲ್ಲಿ ಮೊದಲು ತುಂಡು ಹಾಕಿರಿ. ಒಂದೊಂದು ತುಂಡನ್ನೂ ಓದಿ ನೋಡಿರಿ. ನಿಮಗೆ ಏನು ತಿಳಿಯುವುದು ?

**(೮) ಮಾತಿನಲ್ಲಿಯ ಒಂದೊಂದು ಭಾಗದಿಂದ ಯಾವುದೊಂದು ವಸ್ತುವಾಗಲಿ, ಸಂಗತಿಯಾಗಲಿ, ಕೆಲಸವಾಗಲಿ ತಿಳಿಯುತ್ತಿದೆ.**

**(೯) ಈ ತುಂಡುಮಾತಿನಿಂದ ತಿಳಿಯುವ ವಸ್ತು, ಸಂಗತಿ, ಕೆಲಸ ಮುಂತಾದವುಗಳಿಗೆ ಅರ್ಥ ಎಂದು ಹೆಸರು.**

**(೧೦) ವಾಕ್ಯದಲ್ಲಿ ಅರ್ಥವುಳ್ಳ ಪ್ರತಿಯೊಂದು ಭಾಗಕ್ಕೆ ತುಂಡು ಮಾತು ಅಥವಾ ಪದ ಎನ್ನುವರು.**

## ಎಚ್ಚರಿಕೆ

ವಾಕ್ಯದಲ್ಲಿ ಪದಗಳನ್ನು ಬಿಡಿಸುವಾಗ ಅರ್ಥ ಸರಿಯಾಗಿ ಬರುವಂತೆ ಎಚ್ಚರ ಪಡಬೇಕು. ಇಲ್ಲವಾದರೆ ಮಾತಿನ ಅರ್ಥವೇ ತಿಳಿಯುವುದಿಲ್ಲ; ಒಮ್ಮೊಮ್ಮೆ ಬೇರೆ ಅರ್ಥವೂ ಬರಬಹುದು.

ಹುಡುಗ | ಸಾಲೆಗೆ ಬರುತ್ತಾನೆ.

ಈ ವಾಕ್ಯವನ್ನು ಹೀಗೆಯೇ ಭಾಗಮಾಡಿ ಬರೆಯಬೇಕು. ಅದನ್ನು ಬಿಟ್ಟು

ಹುಡು | ಗಸಾ | ಲೆಗೆ ಬ | ರುತ್ತಾನೆ.

ಎಂದು ಬರೆದರೆ ಮಾತಿನ ಅರ್ಥವೇ ಆಗುವುದಿಲ್ಲ. ಒಂದು ವೇಳೆ,

ಹುಡುಗ | ಸಾಲೆ | ಗೆ ಬರುತ್ತಾನೆ.

ಎಂದು ಬರೆದರೆ (ಬಳಕೆಯಲ್ಲಿ) ಬೇರೆ ಅರ್ಥವೇ ಆಗುವುದು. ಆದುದರಿಂದ ಬರೆಹದಲ್ಲಿ ಪದಗಳನ್ನು ಬಿಡಿಸಿ ಬರೆಯುವ ಬಗೆಗೆ ಬಹಳ ಲಕ್ಷ ಕೊಡಬೇಕು.

ಪದಗಳನ್ನು ಬಿಡಿಸುವಾಗ ಮೇಲಿನಂತೆ ನಡುವೆ ಗೆರೆ ಹಾಕುವ ಕಾರಣವಿಲ್ಲ. ಎರಡು ಪದಗಳ ನಡುವೆ ಸ್ವಲ್ಪ ಸ್ಥಳವನ್ನು ಬಿಟ್ಟರಾಯಿತು.

## ಬಳಕೆ

(೧) ಕಾಗೆಯು ಕತೆಯಲ್ಲಿ ಎಷ್ಟು ಪದಗಳಿವೆ, ಎಣಿಸಿ ಹೇಳಿರಿ.

(೨) ಕೆಳಗೆ ಕೆಲವು ಪದಗಳನ್ನು ಕೊಟ್ಟಿದೆ. ಅವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯ ಮಾಡಿರಿ.

ಬೆಕ್ಕು, ಜೇನುನೊಣಗಳಿಂದ, ಜಂಗಮರಿಗೆ, ಕೋಣೆಯಲ್ಲಿ, ಬಂದಿತು.

(೩) ಕೆಳಗೆ ವಾಕ್ಯಗಳೊಳಗಿನ ಪದಗಳನ್ನು ಚದುರಿಸಿ ಬರೆದಿದೆ. ಅವು ಗಳನ್ನು ಹೊಂದಿಸಿ ವಾಕ್ಯಗಳನ್ನು ಮಾಡಿರಿ.

| | | |
|---|---|---|
| ರಾಮು | ಹುಡುಗರು | ಸೂರ್ಯ |
| ಬೆಳಕನ್ನು | ರಾವಣನನ್ನು | ಕಲ್ಲುಗಳನ್ನು |
| ತೂರುತ್ತಾರೆ. | ಕೊಡುತ್ತಾನೆ. | ಕೊಂದನು. |

## ಕೇಳಿಕೆ

(೪) ಮಾತುಗಳನ್ನು ಬಿಡಿಬಿಡಿಸಿ ಬರೆಯುವ ಕಾರಣವೇನು ?

(೫) ಅರ್ಥವೆಂದರೇನು ? ಉದಾಹರಣ ಕೊಟ್ಟು ಹೇಳಿರಿ.

(೬) ಪದ ಎಂದರೇನು ?

---

## ೪ನೆಯ ಪಾಠ

### ಆಖ್ಯೇಯ-ಆಖ್ಯಾತ

(೧) ಹಕ್ಕಿ | ಹಾರುತಿದೆ

(೨) ಕರಡಿ | ಕುಣಿತವನ್ನು ಕಲಿಯುತ್ತಿದೆ.

(೩) ದೊಡ್ಡ ಹುಡುಗರು ಏಳನೆಯ ತರಗತಿಯಲ್ಲಿ ಓದುತ್ತಾರೆ.

ಈ ವಾಕ್ಯಗಳನ್ನು ಲಕ್ಷಗೊಟ್ಟು ಓದಿರಿ. ಪ್ರತಿಯೊಂದರಲ್ಲಿಯೂ ಎಷ್ಟೆಷ್ಟು ಪದಗಳಿವೆ? ಮೊದಲನೆಯ ವಾಕ್ಯದಲ್ಲಿ ಎರಡು ಪದಗಳಿವೆ. ಒಂದು ಪದವು ಹಕ್ಕಿಯ ವಿಷಯವಾಗಿ ಹೇಳಿದೆ; ಮತ್ತೊಂದು ಪದವು ಅದು ಹಾರುವ ಕೆಲಸವನ್ನು ಮಾಡುತ್ತಿದೆ ಎಂದು ಹೇಳಿದೆ. ಎರಡನೆಯ ವಾಕ್ಯದಲ್ಲಿ ಮೂರು ಪದಗಳಿವೆ. ಅವುಗಳಲ್ಲಿ 'ಕರಡಿ' ಎಂಬುದು ಕರಡಿ ಎಂಬ ಒಂದು ಪ್ರಾಣಿಯ ವಿಷಯವಾಗಿ ಹೇಳುತ್ತಿದೆ. ಉಳಿದ 'ಕುಣಿತವನ್ನು ಕಲಿಯುತ್ತಿದೆ' ಎಂಬ ಪದಗಳು ಆ ಕರಡಿಯು ಮಾಡುವ ಕೆಲಸವನ್ನು ಹೇಳುತ್ತಿವೆ. ಅದರಂತೆ ಮೂರನೆಯ ಮಾತಿನಲ್ಲಿ ದೊಡ್ಡ ಹುಡುಗರು ಎಂಬಿವು ಹುಡುಗರ ವಿಷಯ ವಾಗಿಯೂ ಏಳನೆಯ ತರಗತಿಯಲ್ಲಿ ಓದುತ್ತಾರೆ ಎಂಬಿವು ಅವರು ಮಾಡುವ ಕೆಲಸದ ಬಗೆಗೂ ಹೇಳುತ್ತಿವೆ.

ಇದರ ಮೇಲಿಂದ ಪ್ರತಿಯೊಂದು ವಾಕ್ಯದಲ್ಲಿಯೂ ಯಾವುದರ ಬಗೆಗೆ ಹೇಳಿದೆ ಎಂಬುದನ್ನು ಹೇಳುವ ಒಂದು ಭಾಗ, ಏನನ್ನು ಹೇಳಿದೆ ಎಂಬುದನ್ನು ಹೇಳುವ ಇನ್ನೊಂದು ಭಾಗ ಹೀಗೆ ಎರಡು ಮುಖ್ಯ ಭಾಗಗಳು ಇರುತ್ತವೆಂಬು ದನ್ನು ನೀವು ತಿಳಿಯಬಹುದು. ಹಾಗಾದರೆ,

ಒಕ್ಕಲಿಗರು ಬೆಳೆಯನ್ನು ಕೊಯ್ಯುತ್ತಾರೆ.

ಒಂದು ನರಿ ಬಹಳವಾಗಿ ನೀರಡಿಸಿತ್ತು.

ಜಾಣನಾದ ರಾಜ ತನ್ನ ಇದಿರಿಗೆ ಕೂಸನ್ನು ತರಿಸಿದನು.

ಈ ವಾಕ್ಯಗಳನ್ನು ಓದಿರಿ; ಅವುಗಳಲ್ಲಿ ಯಾವುದರ ಬಗೆಗೆ ಹೇಳಿದೆ, ಏನನ್ನು

(೧೧) ವಾಕ್ಯದಲ್ಲಿ ಎಷ್ಟೇ ಪದಗಳಿದ್ದರೂ ಅವುಗಳಲ್ಲಿ ಮುಖ್ಯವಾಗಿ ಎರಡೇ ಭಾಗಗಳು ಇರುತ್ತವೆ.

(೧೨) ವಾಕ್ಯದಲ್ಲಿ ಯಾವುದರ ಬಗೆಗೆ ಹೇಳಿದೆಯೋ ಅದು ಒಂದನೆಯ ಭಾಗದಲ್ಲಿ, ಏನನ್ನು ಹೇಳಿದೆಯೋ ಅದು ಎರಡನೆಯ ಭಾಗದಲ್ಲಿ ಬರುತ್ತವೆ

(೧೩) ವಾಕ್ಯದಲ್ಲಿ ಯಾವುದರ ವಿಷಯವಾಗಿ ಹೇಳಿದೆಯೋ ಅದನ್ನು ಹೇಳುವ ಪದವು ಆಖ್ಯೇಯ ಪದ; ಈ ಪದವು ಮೊದಲನೆಯ ಭಾಗದಲ್ಲಿರುತ್ತದೆ ಏನನ್ನು ಹೇಳಿದೆಯೋ ಅದನ್ನು ಹೇಳುವ ಪದ ಆಖ್ಯಾತ ಪದ. ಇದು ಎರಡನೆಯ ಭಾಗದಲ್ಲಿರುತ್ತದೆ.

ಯಾವ ವಾಕ್ಯ ಕೊಟ್ಟರೂ ಅದನ್ನು ಕೆಳಗೆ ತೋರಿಸಿದಂತೆ ಭಾಗ ಮಾಡಬೇಕು. ಇದಕ್ಕೆ ವಾಕ್ಯವಿಭಜನ ಎಂದು ಹೆಸರು.

### ವಾಕ್ಯವಿಭಜನ

| ವಾಕ್ಯ | ಆಖ್ಯೇಯ | ಆಖ್ಯಾತ |
|---|---|---|
| (೧) ಹಕ್ಕಿ ಹಾರುತಿದೆ. | ಹಕ್ಕಿ | ಹಾರುತಿದೆ. |
| (೨) ಕರಡಿ ಕುಣಿತವನ್ನು ಕಲಿಯುತ್ತಿದೆ. | ಕರಡಿ | ಕುಣಿತವನ್ನು ಕಲಿಯುತ್ತಿದೆ. |
| (೩) ದೊಡ್ಡ ಹುಡುಗರು ಏಳನೆಯ ತರಗತಿಯಲ್ಲಿ ಓದುತ್ತಾರೆ. | ದೊಡ್ಡ ಹುಡುಗರು | ಏಳನೆಯ ತರಗತಿಯಲ್ಲಿ ಓದುತ್ತಾರೆ. |
| (೪) ಒಕ್ಕಲಿಗರು ಬೆಳೆಯನ್ನು ಕೊಯ್ಯುತ್ತಾರೆ. | ಒಕ್ಕಲಿಗರು | ಬೆಳೆಯನ್ನು ಕೊಯ್ಯುತ್ತಾರೆ. |

ಉಳಿದ ಎಲ್ಲ ವಾಕ್ಯಗಳನ್ನೂ ಇದರಂತೆಯೇ ವಿಭಜನ ಮಾಡಿರಿ. ಮತ್ತು ಪ್ರತಿಯೊಂದು ವಾಕ್ಯದ ಆಖ್ಯೇಯ ಆಖ್ಯಾತಗಳಲ್ಲಿ ಎಷ್ಟೆಷ್ಟು ಪದಗಳಿವೆ ಎಣಿಸಿ ನೋಡಿರಿ.

(೧೪) ಆಖ್ಯೇಯ ಆಖ್ಯಾತಗಳಲ್ಲಿ ಒಂದೊಂದೇ ಪದವೂ ಇರಬಹುದು: ಹೆಚ್ಚು ಪದಗಳೂ ಇರಬಹುದು.

## ಬಳಕೆ

(೧) ಆಖ್ಯೇಯ ಪದಗಳನ್ನು ಗುರುತಿಸಿರಿ.

ಹುಡುಗರು ಆಡುತ್ತಾರೆ. ರಾಮನು ಬಿಲ್ಲನ್ನು ಮುರಿದನು.

(೨) ಆಖ್ಯಾತ ಪದಗಳನ್ನು ಗುರುತಿಸಿರಿ.

ಮಳೆ ಬಂದಿತು. ಆಕಳು ಮೇಯುತ್ತಿದೆ.

(೩) ಕೆಳಗಿನ ವಾಕ್ಯಗಳ ಆಖ್ಯೇಯ ಆಖ್ಯಾತ ಭಾಗಗಳನ್ನು ಬೇರೆ ಬೇರೆ ಮಾಡಿ ಬರೆಯಿರಿ. (ವಾಕ್ಯವಿಭಜನ ಮಾಡಿರಿ )

ಕುಮಾರವ್ಯಾಸರು ಕನ್ನಡ ಮಹಾಭಾರತವನ್ನು ಬರೆದರು.

ಪುಲಕೇಶಿ ಹರ್ಷವರ್ಧನನನ್ನು ನರ್ಮದಾ ತೀರದಲ್ಲಿ ಸೋಲಿಸಿದನು.

ಶ್ರೀರಾಮನ ಹೆಂಡತಿಯಾದ ಸೀತೆ ಅಶೋಕವನದಲ್ಲಿದ್ದಳು.

(೪) ಈ ಆಖ್ಯೇಯಗಳಿಗೆ ತಕ್ಕ ಆಖ್ಯಾತಗಳನ್ನು ಕೆಳಗಿನ ಗುಂಪಿನೊಳಗಿಂದ ಆಯ್ದು ಬರೆಯಿರಿ:—

ಆಕಳಕರು............ ಒಂಟೆಗಳು............ ನಕ್ಷತ್ರಗಳು................

ಮೈಸೂರಿನ ಅರಸರು................

ಉಸುಕಿನಲ್ಲಿ ಓಡುತ್ತಿವೆ. ರಾಜ್ಯವನ್ನು ಚೆನ್ನಾಗಿ ಆಳುತ್ತಾರೆ. ಜಿಗಿಯುತ್ತಿದೆ. ರಾತ್ರಿಯಲ್ಲಿ ಲಕಲಕ ಹೊಳೆಯುತ್ತವೆ.

(೫) ಈ ಆಖ್ಯಾತಗಳಿಗೆ ತಕ್ಕ ಆಖ್ಯೇಯಗಳನ್ನು ಕೆಳಗಿನ ಗುಂಪಿನಲ್ಲಿ ಆಯ್ದು ಹೊಂದಿಸಿ ಬರೆಯಿರಿ.

............ಹಣ್ಣುಗಳನ್ನು ತಿನ್ನುತ್ತಿವೆ ........ಪೇಟೆಯಲ್ಲಿ ಸಿಕ್ಕುತ್ತಿವೆ.

............ಕೆರೆಗೆ ಹೋಗುತ್ತಿವೆ................ಲಂಕೆಯನ್ನು ಸುಟ್ಟನು.

............ಎಂದು ಬರುತ್ತಾರೆ ?

ಹಿರಿಯಯ್ಯನವರು, ಗಿಳಿಗಳು, ಚೆಂಡುಗಳು, ದನಗಳು, ಹನುಮಂತನು

## ಕೇಳಿಕೆ

(೬) ವಾಕ್ಯದಲ್ಲಿ ಮುಖ್ಯವಾಗಿ ಎಷ್ಟು ಭಾಗಗಳಿರುವವು ? ಯಾವವು ?

(೭) ಆಖ್ಯೇಯವೆಂದರೇನು ?

(೮) ಆಖ್ಯಾತವೆಂದರೇನು ?

# ೫ನೆಯ ಪಾಠ

## ಕ್ರಿಯಾಪದ-ಕರ್ತೃಪದ





ಈ ಚಿತ್ರವನ್ನು ನೋಡಿರಿ; ಇಡಿಯ ಚಿತ್ರದ ಕಲ್ಪನೆ ಬರುವಂತೆ ಒಂದೊಂದು ವಾಕ್ಯವನ್ನು ಹೇಳಿರಿ.

(೧) ಹುಡುಗ ಓಡುತ್ತಾನೆ. (೨) ಕುದುರೆ ಓಡುತ್ತಿದೆ.

(೩) ನಾಯಿ ಓಡುತ್ತಿದೆ.

ಈ ಮೂರು ಚಿತ್ರಗಳಲ್ಲಿ ಯಾವ ಕೆಲಸ ನಡೆದಂತೆ ಕಾಣುತ್ತಿದೆ? 'ಓಡುವ' ಕೆಲಸ. ಈ ಕೆಲಸವನ್ನು ಹೇಳುವ ಪದಗಳಾವವು? 'ಓಡುತ್ತಾನೆ' 'ಓಡುತ್ತಿದೆ' ಮತ್ತು 'ಓಡುತ್ತಿದೆ.' ಈ ಓಡುವ ಕೆಲಸವನ್ನು ಯಾರು ಯಾರು ಮಾಡುತ್ತಿದ್ದಾರೆ? ಅವರನ್ನು ಹೇಳುವ ಪದಗಳಾವುವು? 'ಹುಡುಗ' 'ಕುದುರೆ' ಮತ್ತು 'ನಾಯಿ'.




ಈ ಚಿತ್ರಗಳನ್ನು ಸರಿಯಾಗಿ ನೋಡಿರಿ. ಇಲ್ಲಿ ಯಾವ ಯಾವ ಕೆಲಸ ನಡೆದಿದೆ? (ಮೇವನ್ನು) 'ತಿನ್ನುವ ಕೆಲಸ' ಮತ್ತು (ಕುಡವನ್ನು) 'ಕಾಯಿಸುವ ಕೆಲಸ' ನಡೆದಿವೆ. ಈ ಕೆಲಸಗಳನ್ನು ಹೇಳುವ ಪದಗಳಾವುವು? 'ತಿನ್ನುತ್ತಿದೆ' ಮತ್ತು 'ಕಾಯಿಸುತ್ತಾನೆ.' ಈ ಕೆಲಸಗಳನ್ನು ಯಾರು ಮಾಡುತ್ತಾರೆ? ಅವರನ್ನು ಹೇಳುವ ಪದಗಳಾವುವು? 'ಆಕಳು', 'ಕಮ್ಮಾರ'.

ಚಿಗರೆ ಮಲಗಿದೆ. ಕೋಳಿ ಕೂಗುತ್ತಿದೆ. ತಾಯಿ ಮಗುವನ್ನು ಎತ್ತಿ ಕೊಂಡಿದ್ದಾಳೆ.

ಈ ವಾಕ್ಯಗಳಿಂದ ಯಾವ ಯಾವ ಕೆಲಸಗಳು ಗೊತ್ತಾಗುತ್ತಿವೆ? 'ಮಲಗುವ' ಕೆಲಸ, 'ಕೂಗುವ' ಕೆಲಸ ಮತ್ತು (ಮಗುವನ್ನು) 'ಎತ್ತಿ ಕೊಳ್ಳುವ' ಕೆಲಸ. ಅವುಗಳನ್ನು ಹೇಳುವ ಪದಗಳಾವುವು? 'ಮಲಗಿದೆ', 'ಕೂಗುತ್ತಿದೆ' ಮತ್ತು 'ಎತ್ತಿಕೊಂಡಿದ್ದಾಳೆ'. ಆ ಕೆಲಸಗಳನ್ನು ಯಾರು ಮಾಡಿದ್ದಾರೆ? 'ಚಿಗರೆ', 'ಕೋಳಿ' ಮತ್ತು 'ತಾಯಿ'.

ಆನೆ ಕೆರೆಯಲ್ಲಿ ನಿಂತಿದೆ. ಸೀತೆ ಕೊಡವನ್ನು ಒಯ್ಯುತ್ತಾಳೆ. ಕುರುಬ ಕುರಿಗಳನ್ನು ಕಾಯುತ್ತಾನೆ. ರಂಗ ಊರಿಗೆ ಹೋದನು.

ಈ ವಾಕ್ಯಗಳಿಂದ ಯಾವ ಯಾವ ಕೆಲಸಗಳು ನಡೆದದ್ದು ಗೊತ್ತಾಗುತ್ತಿದೆ? ಮತ್ತು ಅವುಗಳನ್ನು ಮಾಡಿದವರು ಯಾರು ಯಾರು? ಅವರನ್ನು ಹೇಳುವ ಪದಗಳಾವುವು?

**ಮಾದರಿ—** ೧ನೆಯ ವಾಕ್ಯದಲ್ಲಿ 'ನಿಲ್ಲುವ' ಕೆಲಸ ತಿಳಿಯುತ್ತಿದೆ. 'ನಿಂತಿದೆ' ಎಂಬ ಪದದಿಂದ ಅದು ಗೊತ್ತಾಗುತ್ತಿದೆ. ಆ ಕೆಲಸವನ್ನು ಆನೆ ಮಾಡಿದೆ.

ಇದರಂತೆ ಉಳಿದವುಗಳನ್ನು ಹೇಳಿರಿ.

ಮೇಲೆ ಬಂದಿರುವ ಎಲ್ಲ ವಾಕ್ಯಗಳೊಳಗಿನ ಕೆಲಸ ಹೇಳುವ ಪದಗಳನ್ನೆಲ್ಲ ಆರಿಸಿ ಒಂದೊಂದಾಗಿ ಹೇಳಿರಿ.

ಓಡುತ್ತಾನೆ, ಓಡುತ್ತಿದೆ, ತಿನ್ನುತ್ತಿದೆ,................ಉಳಿದವುಗಳನ್ನು ಹೀಗೆಯೇ ಹೇಳಿರಿ.

ಇದರಂತೆಯೇ ಮೇಲಿನ ವಾಕ್ಯಗಳಲ್ಲಿ ಬಂದಿರುವ ಕೆಲಸ ಮಾಡಿದವರನ್ನು ಹೇಳುವ ಪದಗಳನ್ನು ತಿಳಿಸಿರಿ.

ಹುಡುಗ, ಕುದುರೆ, ನಾಯಿ, ಆಕಳು... ....

ಉಳಿದವುಗಳನ್ನೂ ಇದರಂತೆಯೇ ಹೇಳಿರಿ.

ಇನ್ನು, ಕೆಲಸವನ್ನು ಹೇಳುವ ಮತ್ತು ಕೆಲಸ ಮಾಡಿದವರನ್ನು ಹೇಳುವ ಬೇರೆ ಕೆಲವು ಪದಗಳನ್ನು ನಿಮಗೆ ಗೊತ್ತಿರುವ ಬೇರೆ ಬೇರೆ ವಾಕ್ಯಗಳಿಂದ ಆರಿಸಿ ಹೇಳಿರಿ.

**(೧೫) ಕೆಲಸವನ್ನು ಹೇಳುವ ಪದಗಳು ಕ್ರಿಯಾಪದಗಳು.**
**(ಕ್ರಿಯಾ-ಕೆಲಸ)**

**(೧೬) ಕೆಲಸ ಮಾಡಿದವರನ್ನು ಹೇಳುವ ಪದಗಳು ಕರ್ತೃ ಪದಗಳು.**
**ಕರ್ತೃ-ಕೆಲಸ ಮಾಡುವವನು.**

**ಸೂಚನೆ**— ವಾಕ್ಯದಲ್ಲಿ ಮೊದಲು ಕ್ರಿಯಾಪದವನ್ನು ಹುಡುಕಿರಿ. ಆ ಮೇಲೆ ಕ್ರಿಯಾಪದವನ್ನು ಹಿಡಿದು ಯಾವನು, ಯಾವಳು, ಯಾವುದು, ಯಾರು ಮುಂತಾಗಿ ಪ್ರಶ್ನೆ ಮಾಡಿರಿ. ಆಗ ಉತ್ತರ ಬರುವುದೇ ಕರ್ತೃ.

**ಬಳಕೆ**

(೧) ಜೂಜಿನ ಕುದುರೆ ಸವಾರನನ್ನು ಕೆಡವಿತು.
ತುಂಟ ನಾಯಿ ರೊಟ್ಟಿಯನ್ನು ಕಸಿದುಕೊಂಡಿತು.
ತುಂಗಾನದಿಯ ನೀರು ಬಹಳ ಸಿಹಿ ಇರುತ್ತಿದೆ.
ನಾಲ್ಕು ಜನರು ಬೀದಿಯಲ್ಲಿ ಹೋಗುವರು.
ಆ ದೊಡ್ಡ ಸಿಂಹದ ನೆರಳು ಬಾವಿಯಲ್ಲಿ ಕಾಣಿಸಿತು.

ಮೇಲಿನ ವಾಕ್ಯಗಳಲ್ಲಿ ಕರ್ತೃಪದಗಳನ್ನು ಆಯ್ದು ಬರೆಯಿರಿ.

(೨) ಕೆಳಗಿನ ಮಾತುಗಳಲ್ಲಿ ತೆರವಿದ್ದ ಸ್ಥಳಗಳಲ್ಲಿ ಕೆಳಗಿನ ಗುಂಪಿನೊಳಗಿಂದ ತಕ್ಕ ಕರ್ತೃಪದಗಳನ್ನು ಹುಡುಕಿ ತುಂಬಿರಿ.

............ಹರಿಯುವುದು ................ಜಾತ್ರೆಗೆ ಹೋಗುತ್ತಾನೋ ?
...............ಚೆನ್ನುಡಿಯನ್ನು ಓದುತ್ತಾಳೆ ..............ಒಡೆಯಿತು.
........ಅತ್ತಿತು.
ಕೂಸು, ಭೀಮವ್ವ, ಕನ್ನಡಿ, ಹನುಮಂತಣ್ಣ, ಹೊಳೆ.

(೩) ಕೊಡಗೂಸು ಶಿವಲಿಂಗವನ್ನು ಭಕ್ತಿಯಿಂದ ಪೂಜಿಸಿದಳು.
ಸಳನು ಹುಲಿಯನ್ನು ಕಠಾರಿಯಿಂದ ಇರಿದನು.
ತಾಯಿ ಕೂಡಲೆ ಮಗುವನ್ನು ಅಪ್ಪಿಕೊಂಡಳು.
ಮಾವಿನ ಹಣ್ಣುಗಳು ಈ ವರುಷ ಬಹಳ ತುಟ್ಟಿಯಾಗಿವೆ.

ಮೇಲಿನ ವಾಕ್ಯಗಳಲ್ಲಿ ಇರುವ ಕ್ರಿಯಾಪದಗಳನ್ನು ಹೇಳಿರಿ.

(೪) ಕೆಳಗಿನ ಮಾತುಗಳೊಳಗೆ — ಈ ಗೆರೆಯಿದ್ದಲ್ಲಿ ಕೆಳಗೆ ಕೊಟ್ಟ ಗುಂಪಿನೊಳಗಿಂದ ತಕ್ಕ ಕ್ರಿಯಾಪದಗಳನ್ನು ಹುಡುಕಿ ತುಂಬಿರಿ.

ನೀನು ಯಾವಾಗ——? ಕಲ್ಲು ನೀರಲ್ಲಿ——.
ರಾಮ ಸೀತಾದೇವಿಯನ್ನು——. ಕೋಳಿಗಳು ಬೆಳಗಿನಲ್ಲಿ——.

ಮುಳುಗುವುದು, ಕೂಗುತ್ತಿವೆ, ಬಂದೆ, ಮದುವೆಯಾದನು.

(೫) ಚಂದ್ರ, ಹಾವು, ತೋಳ, ನರಿ ಈ ಕರ್ತೃಪದಗಳನ್ನಿಟ್ಟು ಕೊಂಡು ಒಂದೊಂದು ವಾಕ್ಯವನ್ನು ಮಾಡಿರಿ.

(೬) ಸತ್ತನು, ತಿಂದೆಯಾ, ಕೇಳುವೆನು, ಬಿದ್ದೀತು ಈ ಕ್ರಿಯಾಪದ ಗಳನ್ನಿಟ್ಟುಕೊಂಡು ವಾಕ್ಯಗಳನ್ನು ಬರೆಯಿರಿ.

## ಕೇಳಿಕೆ

(೭) ಕರ್ತೃಪದವೆಂದರೇನು ?
(೮) ಕ್ರಿಯಾಪದವೆಂದರೇನು ?
(೯) ಕರ್ತೃಪದವನ್ನು ಹೇಗೆ ಗುರುತಿಸುವಿರಿ ?

---

# ೬ನೆಯ ಪಾಠ

## ಕರ್ಮಪದ





ಈ ಮೂರೂ ಚಿತ್ರಗಳನ್ನು ಸರಿಯಾಗಿ ನೋಡಿರಿ; ಅಲ್ಲಿರುವ ಮನುಷ್ಯನ ಬಗೆಗೆ ಒಂದೊಂದು ವಾಕ್ಯವನ್ನು ಹೇಳಿರಿ.

(೧) ಮನುಷ್ಯ ಕೊಡಲಿ ಹಿಡಿದುಕೊಂಡು ಸುಮ್ಮನೆ ನಿಂತಿದ್ದಾನೆ.
(೨) ಮನುಷ್ಯ ಕೊಡಲಿಯನ್ನು ಕಟ್ಟಿಗೆಗೆ ಹಚ್ಚಿದ್ದಾನೆ.
(೩) ಮನುಷ್ಯ ಕೊಡಲಿಯಿಂದ ಕಟ್ಟಿಗೆಗಳನ್ನು ಒಡೆಯುತ್ತಿದ್ದಾನೆ.

ಮೂರನೆಯ ಚಿತ್ರದಲ್ಲಿ ಯಾವ ಕೆಲಸ ನಡೆದದ್ದು ತಿಳಿಯುತ್ತದೆ? (ಕಟ್ಟಿಗೆಯನ್ನು) ಒಡೆಯುವ ಕೆಲಸ. ಅದನ್ನು ಹೇಳುವ ಕ್ರಿಯಾಪದ ಯಾವುದು? ಒಡೆಯುತ್ತಿದ್ದಾನೆ.

ಆ ಮನುಷ್ಯ ಒಂದನೆಯ ಚಿತ್ರದಲ್ಲಿ ಸುಮ್ಮನೆ ಏಕೆ ನಿಂತಿದ್ದಾನೆ? ಅಲ್ಲಿ ಒಡೆಯಲು ಕಟ್ಟಿಗೆಯಿಲ್ಲ. ಎರಡನೆಯ ಚಿತ್ರದಲ್ಲಿ ಅವನು ಏನು ಮಾಡುತ್ತಾನೆ? ಅಲ್ಲಿ ಅವನಿಗೆ ಯಾವ ವಸ್ತು ಹೆಚ್ಚಿಗೆ ಸಿಕ್ಕಿದೆ? ಕಟ್ಟಿಗೆ. ಇದರಿಂದ ಯಾವ ಕೆಲಸಕ್ಕೆ ಅನುಕೂಲವಾಗಿದೆ? ಒಡೆಯುವ ಕೆಲಸಕ್ಕೆ. ಏನು ಇರದಿದ್ದರೆ ಒಡೆಯುವ ಕೆಲಸ ನಡೆಯುತ್ತಿದ್ದಿಲ್ಲ? ಕಟ್ಟಿಗೆ.




ಈ ಚಿತ್ರಗಳ ಬಗೆಗೆ ಒಂದೊಂದು ವಾಕ್ಯವನ್ನು ಹೇಳಿರಿ.

ಮಂಗ ಹಣ್ಣನ್ನು ತಿನ್ನುತ್ತಿದೆ. ಹಾವುಗಾರ ಪುಂಗಿಯನ್ನು ಊದುತ್ತಾನೆ.

ಇಲ್ಲಿ ಕ್ರಿಯಾಪದಗಳಾವುವು? 'ತಿನ್ನುತ್ತಿದೆ', 'ಊದುತ್ತಾನೆ.' ಅವು ಹೇಳುವ ಕೆಲಸಗಳಾವುವು? ತಿನ್ನುವ ಕೆಲಸ. ಊದುವ ಕೆಲಸ.

ಇಲ್ಲಿ ಕರ್ತೃಪದಗಳಾವುವು? ಮಂಗ, ಹಾವುಗಾರ.

ಏನು ಸಿಕ್ಕಿರುವದರಿಂದ ಮಂಗವು ತಿನ್ನುವ ಕೆಲಸ ಮಾಡುತ್ತಿದೆ? ಹಣ್ಣು ಸಿಕ್ಕಿರುವದರಿಂದ. ಇದರಂತೆಯೆ ಯಾವುದು ಇದ್ದುದರಿಂದ ಹಾವುಗಾರನು ಊದುವ ಕೆಲಸ ಮಾಡುತ್ತಿದ್ದಾನೆ? ಪುಂಗಿಯಿದ್ದುದರಿಂದ. ಈ ಹಣ್ಣು, ಪುಂಗಿಗಳನ್ನು ಹೇಳುವ ಪದಗಳನ್ನು ವಾಕ್ಯಗಳಲ್ಲಿ ತೋರಿಸಿರಿ. ಅವುಗಳನ್ನು ಓದಿ ಹೇಳಿರಿ. ಹಣ್ಣನ್ನು, ಪುಂಗಿಯನ್ನು.

**(೧೭) ಕೆಲವು ವಾಕ್ಯಗಳಲ್ಲಿ ಕ್ರಿಯಾಪದಗಳು ಹೇಳುವ ಕೆಲಸ ಮಾಡುವದಕ್ಕೆ ಕರ್ತೃವಿಗೆ ಕೆಲವು ವಸ್ತುಗಳು ಅವಶ್ಯವಾಗಿರುತ್ತವೆ.**

ಹುಡುಗ ಕನ್ನಡಿಯನ್ನು ತುಳಿದನು. ಅಗಸ ಬಟ್ಟೆಗಳನ್ನು ಒಗೆಯುತ್ತಾನೆ. ಈ ವಾಕ್ಯಗಳಲ್ಲಿ ಕ್ರಿಯಾಪದಗಳಾವುವು? ತುಳಿದನು, ಒಗೆಯುತ್ತಾನೆ.

ಈ ಕೆಲಸಗಳು ನಡೆಯುವುದಕ್ಕೆ ಯಾವ ವಸ್ತುಗಳು ಅವಶ್ಯವಾಗಿವೆ? ಕನ್ನಡಿ, ಬಟ್ಟೆಗಳು. ಈ ವಸ್ತುಗಳನ್ನು ವಾಕ್ಯದಲ್ಲಿ ಯಾವ ಯಾವ ಪದಗಳು ಹೇಳುತ್ತಿವೆ?

ಕನ್ನಡಿಯನ್ನು, ಬಟ್ಟೆಗಳನ್ನು.

(೧) ಸೆಟ್ಟಿ ಬೆಲ್ಲವನ್ನು ತೂಗುತ್ತಾನೆ. (೨) ನಾಯಿ ಮೊಲವನ್ನು ಬೆನ್ನಟ್ಟಿದೆ.

(೩) ಕೋಳಿ ತತ್ತಿಯನ್ನು ಇಡುತ್ತಿದೆ. (೪) ಉಪ್ಪಾರ ಗೋಡೆಯನ್ನು ಕಟ್ಟುತ್ತಾನೆ.

ಈ ವಾಕ್ಯಗಳಲ್ಲಿ ಕ್ರಿಯಾಪದಗಳು ಹೇಳುವ ಕೆಲಸಗಳನ್ನು ಮಾಡಲಿಕ್ಕೆ ಕರ್ತೃಗಳಿಗೆ ಯಾವ ವಸ್ತುಗಳು ಅವಶ್ಯವಾಗಿವೆ? ಮತ್ತು ಅವುಗಳನ್ನು ವಾಕ್ಯಗಳಲ್ಲಿಯ ಯಾವ ಯಾವ ಪದಗಳು ಹೇಳುತ್ತಿವೆ?

**ಮಾದರಿ:**—'ನೆಟ್ಟಿ' ಎಂಬ ಕರ್ತೃ ತೂಗುವ ಕೆಲಸ ಮಾಡಲು 'ಬೆಲ್ಲ' ಎಂಬ ವಸ್ತು ಅವಶ್ಯವಾಗಿದೆ. ಮತ್ತು ಅದನ್ನು 'ಬೆಲ್ಲವನ್ನು' ಎಂಬ ಪದವು ಹೇಳುತ್ತಿದೆ. ಇದೇ ರೀತಿಯಲ್ಲಿ ಉಳಿದವುಗಳ ಉತ್ತರಗಳನ್ನು ಹೇಳಿರಿ.

**ನೆರವು:**—ಕ್ರಿಯಾಪದವನ್ನು ಹಿಡಿದು ಯಾರನ್ನು, ಏನನ್ನು, ಯಾವದನ್ನು ಎಂದು ಪ್ರಶ್ನೆ ಮಾಡಿರಿ; ಎಂದರೆ ಆ ಕೆಲಸ ನಡೆಯಲು ಅವಶ್ಯವಾದ ವಸ್ತು ಉತ್ತರವಾಗಿ ಸಿಕ್ಕುವುದು.

**(೧೮) ಕರ್ತೃ ಕ್ರಿಯೆಯನ್ನು ನಡೆಸಲು ಅತಿ ಅವಶ್ಯವಾದ ವಸ್ತುವನ್ನು ಹೇಳುವ ಪದಕ್ಕೆ ಕರ್ಮಪದವೆನ್ನುವರು. ಅಥವಾ ಕ್ರಿಯಾಪದವನ್ನು ಹಿಡಿದು ಏನನ್ನು, ಯಾರನ್ನು, ಯಾವದನ್ನು ಮುಂತಾಗಿ ಪ್ರಶ್ನೆ ಮಾಡಿದರೆ ಬರುವ ಉತ್ತರವೇ ಕರ್ಮಪದ.**

**ಬಳಕೆ**

(೧) ಕೆಳಗಿನ ವಾಕ್ಯಗಳಲ್ಲಿಯ ಕರ್ಮಪದಗಳನ್ನು ಹೇಳಿರಿ.

ನಾನು ಸಮುದ್ರವನ್ನು ನೋಡಿದೆನು. ರಾವುತ ಕುದುರೆಯನ್ನು ಓಡಿಸುತ್ತಾನೆ. ಕೆಟ್ಟ ಜನರು ಕೋಳಿಗಳನ್ನು ಕಾದಾಡಿಸುತ್ತಾರೆ. ಬೇಟೆಗಾರ ಗಿಳಿಗಳನ್ನು ಹಿಡಿದನು.

(೨) ಕೆಳಗಿನ ವಾಕ್ಯಗಳಲ್ಲಿ—ಈ ಗುರುತು ಇದ್ದಲ್ಲಿ ಕರ್ಮಪದಗಳನ್ನು ತುಂಬಿರಿ; ಮತ್ತು ಅವನ್ನು ಕೆಳಗಿನ ಗುಂಪಿನೊಳಗಿಂದ ಆಯ್ದುಕೊಳ್ಳಿರಿ.

ಲಕ್ಷ್ಮಣ ಶೂರ್ಪನಖಿಯ——ಕೊಯ್ದನು. ಸೀತೆ ಬಂಗಾರದ——ನೋಡಿದಳು. ರಾವಣ——ಕದ್ದೊಯ್ದನು. ಹನುಮಂತ——ದಾಟಿ ಲಂಕೆಗೆ ಹೋದನು ರಾಮ ಯುದ್ಧದಲ್ಲಿ——ಕೊಂದನು.

ಸಮುದ್ರವನ್ನು, ಸೀತೆಯನ್ನು, ಮೂಗನ್ನು, ರಾವಣನನ್ನು, ಚಿಗರೆಯನ್ನು.

(೩) ಚಿಕ್ಕಪ್ಪನನ್ನು, ಹುಲಿಯನ್ನು, ಬಂಗಾರವನ್ನು, ಮಕ್ಕಳನ್ನು ಈ ಕರ್ಮಪದಗಳನ್ನಿಟ್ಟು ವಾಕ್ಯಗಳನ್ನು ಮಾಡಿರಿ.

**ಕೇಳಿಕೆ**

(೪) ಕರ್ಮಪದ ಎಂದರೇನು? ಅದನ್ನು ಹೇಗೆ ಗುರುತಿಸುವಿರಿ?

# ೭ನೆಯ ಪಾಠ

## ನಾಮಪದಗಳು








ಈ ಚಿತ್ರಗಳ ಹೆಸರುಗಳನ್ನು ಹೇಳಿರಿ.

ರಾಮು ಬರುತ್ತಾನೆ; ಸೀತೆ ಹೋಗುವಳು; ಹನುಮಂತ ನಕ್ಕನು. ಇಲ್ಲಿ ರಾಮು, ಸೀತೆ, ಹನುಮಂತ ಇವು ಮನುಷ್ಯರ ಹೆಸರುಗಳು.

ಮುದುಕಿ ಕತೆ ಹೇಳುತ್ತಾಳೆ; ಅಗಸ ಬಟ್ಟೆಗಳನ್ನು ಒಗೆಯುತ್ತಾನೆ; ಹಾವುಗಾರ ಹಾವುಗಳನ್ನು ಬಿಟ್ಟನು.

ಈ ಮಾತುಗಳಲ್ಲಿ ಮುದುಕಿ, ಅಗಸ, ಹಾವುಗಾರ ಇವೂ ಒಂದು ರೀತಿಯಿಂದ ಮನುಷ್ಯರ ಹೆಸರುಗಳು ಈ ಎರಡೂ ಬಗೆಯ ಬೇರೆ ಹೆಸರುಗಳನ್ನು ಹೇಳಿರಿ.

(೧) ನಮ್ಮ ಮಾತಿನಲ್ಲಿ ಮನುಷ್ಯರ ಹೆಸರುಗಳು ಎಷ್ಟೋ ಬರುತ್ತಿವೆ.

ಕುದುರೆ ಓಡುತ್ತಿದೆ; ಆಕಳು ಹಿಂಡುವುದು; ನವಿಲು ಹಾರುತ್ತಿದೆಯೇ?

ಈ ಮಾತುಗಳಲ್ಲಿ ಕುದುರೆ, ಆಕಳು, ನವಿಲು, ತಗಣಿ ಮುಂತಾದುವು ಮನುಷ್ಯರಲ್ಲದ ಪ್ರಾಣಿಗಳು. ಇಂಥ ಬೇರೆ ಪ್ರಾಣಿಗಳ ಹೆಸರುಗಳನ್ನು ಹೇಳಿರಿ

(೨) ನಮ್ಮ ಮಾತುಗಳಲ್ಲಿ ಮನುಷ್ಯರು ಹೊರತಾದ ಬೇರೆ ಪ್ರಾಣಿಗಳ ಹೆಸರುಗಳು ಹೇರಳವಾಗಿ ಬರುತ್ತಿವೆ.

ಕಲ್ಲಿನಿಂದ ಗೊಂಬೆ ಮಾಡುತ್ತಾರೆ; ಮರದಲ್ಲಿ ಹಣ್ಣುಗಳು ಇವೆ; ಬಂಗಾರದ ಬೆಲೆ ಬಹಳ; ಕಡುಬಿಗೆ ಬೆಲ್ಲ ಸಾಲದು.

ಈ ಮಾತುಗಳಲ್ಲಿ ಕಲ್ಲು, ಗೊಂಬೆ, ಮರ ಹಣ್ಣು, ಬಂಗಾರ, ಕಡುಬು, ಬೆಲ್ಲ ಇವು ಜೀವವಿಲ್ಲದ ವಸ್ತುಗಳ ಹೆಸರುಗಳು. ಇಂತಹ ಬೇರೆ ಕೆಲವು ಒಡವೆಗಳ ಹೆಸರು ಹೇಳಿರಿ

(೩) ನಮ್ಮ ಮಾತಿನಲ್ಲಿ ಜೀವವಿಲ್ಲದ ವಸ್ತುಗಳ ಹೆಸರುಗಳು ಹೆಚ್ಚಾಗಿ ಬರುತ್ತಿವೆ.

ನಾನು ಧಾರವಾಡಕ್ಕೆ ಹೋಗುತ್ತೇನೆ; ಕನ್ನಡನಾಡು ಬೆಳೆಯುಳ್ಳದು; ತುಂಗಾನದಿಯ ನೀರು ಬಹಳ ಸಿಹಿಯಾಗಿದೆ.

ಈ ಮಾತುಗಳಲ್ಲಿ ಧಾರವಾಡ, ಕನ್ನಡನಾಡು, ತುಂಗಾನದಿ ಇವೆಲ್ಲ ದೇಶದ ಅಥವಾ ಸ್ಥಳಗಳ ಹೆಸರುಗಳು. ಇಂತಹ ಬೇರೆ ಹಲವು ಹೆಸರು ಹೇಳಿರಿ.

(೪) ನಮ್ಮ ಮಾತಿನಲ್ಲಿ ದೇಶ–ಸ್ಥಳಗಳ ಹೆಸರುಗಳೂ ಬಹಳವಾಗಿ ಬರುತ್ತಿವೆ.

**(೧೯) ಹೀಗೆ ನಮ್ಮ ಮಾತಿನಲ್ಲಿ ಬರುವ ಹೆಸರುಗಳಿಂದ ತಿಳಿಯುವ ಮನುಷ್ಯ, ಪಶು, ಪಕ್ಷಿ, ಕ್ರಿಮಿ, ಕೀಟಕ, ನಿರ್ಜೀವ ವಸ್ತು, ದೇಶ ಮೊದಲಾದವುಗಳೆಲ್ಲ ಒಡವೆಗಳು.**

ಈ ಒಡವೆಗಳ ಹೆಸರುಗಳೇ ನಾಮಗಳು. (ನಾಮ— ಹೆಸರು)

**(೨೦) ಯಾವುದೊಂದು ಒಡವೆಯ ಹೆಸರಿಗೆ ನಾಮವೆನ್ನುವರು.**

**ಸೂಚನೆ:**— ಒಡವೆ ನಾಮವಲ್ಲ; ಅದರ ಹೆಸರು ಮಾತ್ರ ನಾಮ. ವಾಕ್ಯದಲ್ಲಿ ಈ ನಾಮಗಳನ್ನು ತಿಳಿಸುವ ಪದಗಳಿಗೇ ನಾಮಪದಗಳೆಂದು ಹೇಳುತ್ತೇವೆ.

**ಬಳಕೆ**

(೧) ಕೆಳಗಿನ ಮಾತುಗಳಲ್ಲಿ ಮನುಷ್ಯರ ಹೆಸರುಗಳನ್ನು ಗುರುತಿಸಿ ಬರೆಯಿರಿ.

ಸಿಂಪಿಗ ಅಂಗಿಯನ್ನು ಹೊಲಿಯುತ್ತಾನೆ. ಮಹಾದೇವಕ್ಕ ಮಾಲೆಯನ್ನು ಮಾಡುತ್ತಾಳೆ. ನೀರಲ್ಲಿ ಸುಲೋಚನೆ ಮುಳುಗಿದಳು. ಅಕ್ಕಸಾಲಿಗ ಸರಿಗೆಯನ್ನು ಮಾಡುತ್ತಾನೆ.

(೨) ಈ ಮಾತುಗಳಲ್ಲಿ ಮನುಷ್ಯರಲ್ಲದ ಪ್ರಾಣಿಗಳ ಹೆಸರುಗಳನ್ನು ಗುರುತಿಸಿ ಬರೆಯಿರಿ.

ಗಿಳಿ ಹಣ್ಣನ್ನು ತಿನ್ನುತ್ತದೆ. ತೋಟಿಗ ಮಂಗಗಳನ್ನು ಓಡಿಸುತ್ತಾನೆ; ಮುಂಗಲಿ ಹಾವನ್ನು ಕೊಂದಿತು.

(೩) ಕೆಳಗಿನ ವಾಕ್ಯಗಳಲ್ಲಿ ಪ್ರಾಣಿಗಳಲ್ಲದ ಒಡವೆಗಳ ಹೆಸರು ಹೇಳಿರಿ.

ಕುಂಬಾರ ಮಣ್ಣಿನಿಂದ ಮಡಿಕೆ ಮಾಡುತ್ತಾನೆ. ಜಾಲಿಯ ಕಟ್ಟಿಗೆಗೆ ಗೆದ್ದಲು ಬಹಳ. ಕಪ್ಪತ ಗುಡ್ಡದಲ್ಲಿ ಬಂಗಾರ ಸಿಕ್ಕುತ್ತಿದೆ.

(೪) ಈ ನುಡಿಗಳಲ್ಲಿ ಸ್ಥಳಗಳ ಹೆಸರುಗಳನ್ನು ಕಂಡುಹಿಡಿಯಿರಿ.

ಮಹಾತ್ಮಾ ಗಾಂಧಿಯವರು ಗುಜರಾಥದವರು. ಮದ್ರಾಸಿನವರು ಹುಳಿ ಹೆಚ್ಚು ತಿನ್ನುತ್ತಾರೆ. ವಿಜಾಪುರದಲ್ಲಿ ಸೆಕೆ ಹೆಚ್ಚು. ಶರಾವತೀ ನದಿಯಿಂದ ಗೆರಸೊಪ್ಪೆಯ ತಡಸಲು ಹುಟ್ಟಿದೆ.

(೫) ಕೆಳಗೆ ತೋರಿಸಿದ ನಾಮಗಳಲ್ಲಿ ಯೋಗ್ಯವಾದವುಗಳನ್ನು ಆಯ್ದುಕೊಂಡು ಗೆರೆಹಾಕಿದ ಸ್ಥಳಗಳಲ್ಲಿ ತುಂಬಿ ಆಯಾ ವಾಕ್ಯಗಳನ್ನು ಪೂರ್ತಿ ಮಾಡಿರಿ.

——ಊರಿಗೆ ಹೋಗುತ್ತಾನೆ ———ಬೆಲ್ಲವನ್ನು ಮಾರುತ್ತಾನೆ. ——ಲಾಗ ಹೊಡೆಯುತ್ತಾನೆ. ———ನೀರು ಹಾಯಿಸುವನು. —— ಕಡಿದರೆ ಕೂಡಲೇ ವಿಷವೇರುವದು ———ದಮಯಂತಿಗೆ ನಳನ ಸುದ್ದಿಯನ್ನು ಹೇಳಿತು.———ಸಕ್ಕರೆಯಿಂದ ಮಾಡುತ್ತಾರೆ.— ——ಬಟ್ಟೆಯ ಗಿರಣಿ ಬಹಳ. ———ತಡಸಲು ಜಗತ್ತಿನಲ್ಲಿಯೇ ಸುಂದರ.

ನಾಯಿ, ಹಂಸ, ಮಿಠಾಯಿಯನ್ನು, ಅಹಮ್ಮದಾಬಾದದಲ್ಲಿ, ಚಿದಂಬರಪ್ಪ, ಶರಾವತಿಯು, ಹಾವು, ತೋಟಿಗ, ಡೊಂಬ, ಸೆಟ್ಟಿ.

## ಕೇಳಿಕೆ

(೧) ನಮ್ಮ ಮಾತಿನಲ್ಲಿ ಯಾವ ಯಾವ ಬಗೆಯ ಹೆಸರುಗಳು ಬರುತ್ತಿವೆ ?

(೭) ನಾಮವೆಂದರೇನು ? ವಸ್ತುಗಳು ನಾಮುಗಳೋ ?

(೮) ನೀವು ಒಂದೊಂದು ಬಗೆಯ ನಾಲ್ಕು ನಾಲ್ಕು ನಾಮಗಳನ್ನು ಹೇಳಿರಿ.

# ೮ನೆಯ ಪಾಠ

## ಸರ್ವನಾಮಗಳು

ನಾನು, ನಾವು; ನೀನು, ನೀವು.



ನಾನು ನಾವು ನೀನು ನೀವು

ಗೋವಿಂದ ಹೇಳುತ್ತಾನೆ—ನಾನು ಜಾತ್ರೆಗೆ ಹೋಗುತ್ತೇನೆ.

ಗೋವಿಂದ, ಶಾಂತಿ ಹೇಳುತ್ತಾರೆ—ನಾವು ಜಾತ್ರೆಗೆ ಹೋಗುತ್ತೇವೆ.

**ಗುರುಗಳು**— ಶಂಕರಾ, ನೀನು ಉತ್ತರವನ್ನು ಹೇಳು, ಎಂದರು

ಭೀಮ–ಕೌರವರಿಗೆ—**ಕೌರವರೇ**, ನೀವು ನೂರು ಮಂದಿಗೆ ನಾನು ಒಬ್ಬನೇ ಸಾಕು, ಎಂದನು.

ಒಂದನೆಯ ಮಾತಿನಲ್ಲಿ ಈ ಮಾತನ್ನು ಆಡಿದವರು ಯಾರು? ಗೋವಿಂದ.

ಇದು ಎಂತಹ ಪದ? ನಾಮಪದ. ನಾನು ಎಂಬುದು ಯಾವ ಹೆಸರಿನ (ಪದದ) ಬದಲಾಗಿ ಬಂದಿದೆ? ಗೋವಿಂದ ಎಂಬುದರ ಬದಲಾಗಿ.

ಹೀಗೆಯೇ ಗೋವಿಂದ, ಸೀತೆ, ಕೂಲಿಕಾರ, ಮುದುಕ, ಅರಸು ಮುಂತಾಗಿ.

ಎಲ್ಲ ಮನುಷ್ಯರು ತಮ್ಮ ತಮ್ಮ ಮಾತಿನಲ್ಲಿ ತಮ್ಮ ಹೆಸರಿನ ಬದಲಾಗಿ 'ನಾನು' ಎಂಬುದನ್ನು ಉಪಯೋಗಿಸುತ್ತಾರೆ.

**(೨೧) ಗಂಡುಸೂ, ಹೆಂಗುಸೂ ಮೊದಲಾಗಿ ಮಾತಾಡುವವರೆಲ್ಲರೂ ಮಾತಿನಲ್ಲಿ ತಮ್ಮ ಹೆಸರಿನ ಬದಲಾಗಿ 'ನಾನು' ಎಂಬುದನ್ನು ಉಪಯೋಗಿಸುತ್ತಾರೆ.**

ಎರಡನೆಯ ಮಾತನ್ನು ಆಡಿದವರು ಯಾರು ? ಶಾಂತಿ, ಗೋವಿಂದ.

ಇವು ಎಂಥ ಪದಗಳು ? ನಾಮಪದಗಳು. ನಾವು ಎಂಬುದು ಯಾವ ಪದಗಳ ಬದಲಿಗೆ ಬಂದಿದೆ ? ಗೋವಿಂದ, ಶಾಂತಿ ಈ ಪದಗಳ ಬದಲು.

**(೨೨) ಮಾತನಾಡುವವರು ಹೆಚ್ಚು ಜನರಿದ್ದರೆ ಅವರು ತಮ್ಮ ಹೆಸರಿನ ಬದಲು ‘ನಾವು’ ಎಂಬುದನ್ನು ಉಪಯೋಗಿಸುತ್ತಾರೆ.**

ಇದರಂತೆ ಮೂರನೆಯ ನಾಲ್ಕನೆಯ ಮಾತುಗಳಲ್ಲಿ ನೀನು, ನೀವು ಎಂಬುವು ಯಾವ ಪದಗಳ ಬದಲು ಬಂದಿವೆ ? ನೀನು ಎಂಬುದು ಶಂಕರನ ಬದಲು, ನೀವು ಎಂಬುದು ಕೌರವರ ಬದಲು ಬಂದಿವೆ. ಈ ಮಾತುಗಳನ್ನು ಆಡಿದವರು ಯಾರು ? ಗುರುಗಳು ಮತ್ತು ಭೀಮ. ಯಾರಿಗೆ ಆಡುತ್ತಾರೆ ? ಶಂಕರನಿಗೆ ಮತ್ತು ಕೌರವರಿಗೆ.

**(೨೩) ಮಾತನಾಡುವವನು ಯಾರಿಗೆ ಹೇಳ (ಕೇಳ) ಬೇಕಾಗಿದೆಯೋ ಅವನ ಅಥವಾ ಅವಳ ಹೆಸರಿನ ಬದಲು ನೀನು ಎಂಬುದನ್ನು ಉಪಯೋಗಿಸುತ್ತಾನೆ. ಒಬ್ಬರಿಗಿಂತ ಹೆಚ್ಚು ಜನರಿಗೆ ಹೇಳು (ಕೇಳು) ವುದು ಇದ್ದರೆ ‘ನೀವು’ ಎಂದು ಉಪಯೋಗಿಸುವನು.**

## ಬಳಕೆ

(೧) ಬಿಟ್ಟ ಸ್ಥಳಗಳಲ್ಲಿ ನಾನು, ನೀನು, ನಾವು, ನೀವು ಎಂಬುವುಗಳನ್ನು ತುಂಬಿರಿ.

ಈ ಕೆಲಸವನ್ನು———ಮಾಡುತ್ತೇನೆ. ಭೀಮಾ———ಊರಿಗೆ ಹೋಗುತ್ತೀಯಾ ? ಕೃಷ್ಣರಾಜಸಾಗರವನ್ನು ನೋಡಲಿಕ್ಕೆ—ಬರುತ್ತೀರಾ ? ನಮ್ಮ ಮನೆಯಲ್ಲಿ—ಏಳು ಜನ ಇದ್ದೇವೆ.

(೨) ನಾನು ಮತ್ತು ನಾವು ಇವುಗಳನ್ನು ಯಾರು ಯಾವಾಗ ಉಪಯೋಗಿಸುತ್ತಾರೆ ?

(೩) ನೀನು, ನೀವು ಇವುಗಳನ್ನು ಯಾರು ಯಾವಾಗ ಉಪಯೋಗಿಸುತ್ತಾರೆ ?

# ೯ನೆಯ ಪಾಠ

## ಸರ್ವನಾಮಗಳು – (ಮುಂದೆ ಸಾಗಿದುದು.)

### ಅವನು, ಅವಳು, ಅವರು, ಅದು, ಅವು.



ಅವನು



ಅವಳು



ಅವರು



ಅದು



ಅವು

(ಅ) ರಾಮ ಅಯೋಧ್ಯೆಯ ಅರಸು; ಅವನು ಸೀತಾದೇವಿಯನ್ನು ಮದುವೆಯಾಗಿದ್ದನು.

(ಆ) ಮುದುಕಿ ಗುಡಿಸಲ ಮುಂದೆ ಕುಳಿತಿದ್ದಳು; ಅವಳು ಹರಕು ಬಟ್ಟೆ ಉಟ್ಟಿದ್ದಳು.

(ಇ) ಪಾಂಡವರು ಜೂಜಿನಲ್ಲಿ ರಾಜ್ಯವನ್ನು ಸೋತರು; ಅವರು ಅಡವಿಗೆ ಹೋದರು

(ಈ) ಆಕಳು ಸಭ್ಯ ಪ್ರಾಣಿ; ಅದು ಸಾಕಿದವನನ್ನು ನಂಬುತ್ತದೆ.

(ಉ) ಆನೆಗಳಿಗೆ ಕಸುವು ಹೆಚ್ಚು; ಅವು ದೊಡ್ಡ ದೊಡ್ಡ ಭಾರವನ್ನು ಎಳೆಯುತ್ತವೆ.

ಹಿಂದಿನ ಪಾಠದಲ್ಲಿ ನಾನು, ನೀನು, ನಾವು, ನೀವು ಎಂಬುವು ಯಾವ ಯಾವ ನಾಮಪದಗಳ ಬದಲು ಬರುತ್ತವೆಯೆಂಬುದನ್ನು ತಿಳಿದು ಕೊಂಡಿರುವಿರಿ ? ಈಗ ಮೇಲಿನ ವಾಕ್ಯಗಳನ್ನು ನೋಡಿರಿ.

'ಅ' ಮಾತಿನಲ್ಲಿ ಯಾರ ವಿಷಯವಿದೆ ? ರಾಮನ ವಿಷಯ. 'ರಾಮ' ಇದು ಎಂತಹ ಪದ ? ನಾಮಪದ. ಮುಂದೆ 'ಅವನು' ಅಂದರೆ ಯಾರು ? ರಾಮ. ಅವನು ಎಂಬುದು ಯಾವ ನಾಮಪದದ ಬದಲು ಬಂದಂತಾಯಿತು ? ರಾಮ ಎಂಬ ನಾಮಪದದ ಬದಲು. ಇಲ್ಲಿ 'ಅವನು' ಎಂಬುದು ಮಾತ ನಾಡುವವನನ್ನು ತೋರಿಸುತ್ತದೆಯೋ ? ಕೇಳುವವನನ್ನು ತೋರಿಸುತ್ತದೆಯೋ?

ಇದರಂತೆ 'ಆ' ಮಾತಿನಲ್ಲಿ 'ಅವಳು' ಅಂದರೆ ಯಾರು ? ಮುದುಕಿ.

'ಮುದುಕಿ' ಇದು ಎಂತಹ ಪದ ? ನಾಮಪದ. ಅಂದಮೇಲೆ 'ಅವಳು' ಎಂಬುದು ಯಾವುದರ ಬದಲು ಬಂದಂತಾಗಿದೆ ? 'ಮುದುಕಿ' ಎಂಬ ನಾಮಪದದ ಬದಲು. ಇಲ್ಲಿ ಅವಳು ಎಂಬುದು ಮಾತನಾಡುವವ ಳನ್ನೂ ತೋರಿಸುವುದಿಲ್ಲ, ಕೇಳುವವಳನ್ನೂ ತೋರಿಸುವುದಿಲ್ಲ.

**(೨೪) ಹೇಳುವವನನ್ನೂ ಕೇಳುವವನನ್ನೂ ಬಿಟ್ಟು, ಮೂರನೆ ಯವನ ಬಗೆಗೆ ಮಾತಾಡುವಾಗ ಮಾತಾಡುವವನು ಆ ಮೂರನೆಯ ವನ ಹೆಸರಿನ ಬದಲು 'ಅವನು' ಎಂಬುದನ್ನೂ, ಮೂರನೆಯವಳ**

**ಬಗೆಗೆ ಹೇಳುವಾಗ ಅವಳ ಹೆಸರಿನ ಬದಲು 'ಅವಳು' ಎಂಬು ದನ್ನೂ ಉಪಯೋಗಿಸುತ್ತಾನೆ.**

'ಇ' ಮಾತಿನಲ್ಲಿ ಪಾಂಡವರು ಇದು ಎಂತಹ ಪದ? ಈ ಪದದ ಬದಲು ಯಾವ ಪದ ಬಂದಿದೆ? ಅವರು.

(೨೫) **ಹೇಳುವವನನ್ನೂ ಕೇಳುವವನನ್ನೂ ಬಿಟ್ಟು ಉಳಿದ ಬಹಳ ಜನರನ್ನು ಕುರಿತು ಮಾತನಾಡುವುದಿದ್ದರೆ ಆ ಜನರೆಲ್ಲರ ಹೆಸರಿನ ಪದಗಳ ಬದಲು 'ಅವರು' ಎಂಬುದನ್ನು ಉಪಯೋಗಿಸುತ್ತಾರೆ.**

ಹೀಗೆಯೇ 'ಈ' ಮತ್ತು 'ಉ' ವಾಕ್ಯಗಳನ್ನು ನೋಡಿರಿ. 'ಈ' ಮಾತಿನಲ್ಲಿಯ 'ಆಕಳು' ಎಂಬ ನಾಮಪದದ ಬದಲು ಅದೇ ವಾಕ್ಯದಲ್ಲಿ ಮುಂದೆ 'ಅದು' ಎಂಬ ಪದವೂ, 'ಉ' ಮಾತಿನಲ್ಲಿ 'ಆನೆಗಳು' ಎಂಬ ನಾಮಪದದ ಬದಲು ಮುಂದೆ (ಆನೆಗಳು ಬಹಳವಿರುವದರಿಂದ) 'ಅವು' ಎಂಬ ಪದವೂ ಬಂದಿದೆ. ಆಕಳು, ಆನೆಗಳು ಮನುಷ್ಯವರ್ಗದವಲ್ಲವಾದ್ದರಿಂದ ಅವುಗಳ ಹೆಸರಿನ ಪದಗಳ ಬದಲು ಮೇಲೆ 'ಅ' 'ಆ' 'ಇ' ಮಾತುಗಳಲ್ಲಿಯಂತೆ 'ಅವನು' 'ಅವಳು' 'ಅವರು' ಎಂಬ ಪದಗಳು ಬರದೆ 'ಅದು' 'ಅವು' ಎಂಬ ಪದಗಳು ಬಂದಿವೆ.

(೨೬) **ಹೇಳುವವನನ್ನೂ, ಕೇಳುವವನನ್ನೂ ಬಿಟ್ಟು ಉಳಿದ ಒಡವೆಗಳನ್ನು ಕುರಿತು ಮಾತನಾಡುವಾಗ ಆ ಒಡವೆಗಳ ಹೆಸರಿನ ಪದಗಳ ಬದಲು 'ಅದು', (ಬಹಳವಿದ್ದರೆ) 'ಅವು' ಎಂಬ ಪದಗಳು ಬರುತ್ತಿವೆ.**

ಹೀಗೆ, ನಾನು, ನಾವು ಎಂಬುವು ಮಾತನಾಡುವ ಒಡವೆಗಳ ಹೆಸರಿನ (ನಾಮಪದ) ಬದಲು;

ನೀನು, ನೀವು ಎಂಬುವು ಮಾತನಾಡಿಸಿಕೊಳ್ಳುವ ಒಡವೆಗಳ ಹೆಸರಿನ ಬದಲು;

ಅವನು, ಅವಳು, ಅವರು, ಅದು, ಅವು ಮುಂತಾದುವು ಮಾತನ್ನು ಹೇಳು, ಕೇಳುವವರನ್ನು ಬಿಟ್ಟು ಉಳಿದ ಒಡವೆಗಳ ಹೆಸರಿನ ಬದಲು ಅದೇ ಅರ್ಥದಲ್ಲಿಯೇ ಬರುತ್ತಿವೆ. ಆದುದರಿಂದ:

**(೨೭) ಎಲ್ಲ ನಾಮಪದಗಳ ಬದಲು ಅದೇ ಅರ್ಥದಲ್ಲಿ ಬರುವ ಶಬ್ದಗಳಿಗೆ ಸರ್ವನಾಮಗಳೆನ್ನುವರು.**

ಸೂಚನೆ: – ಇವನು, ಈತ, ಆತ, ಇವಳು, ಈಕೆ, ಆಕೆ, ಇವರು, ಇದು, ಇವು ಎಂಬುವೂ ಸರ್ವನಾಮಗಳೇ. ಈ ಎಲ್ಲ ಬಗೆಯ ಸರ್ವನಾಮಗಳನ್ನು ತಕ್ಕಂತೆ ಉಪಯೋಗಿಸುವದರಿಂದ ಒಂದೇ ಹೆಸರನ್ನು ಮತ್ತೆ ಮತ್ತೆ ಹೇಳುವ ಕಷ್ಟ ಕಡಮೆಯಾಗುತ್ತದೆ; ಮಾತು ಚೆಂದವಾಗುತ್ತದೆ.

**ಬಳಕೆ**

(೧) ಕೆಳಗಿನ ವಾಕ್ಯಗಳಲ್ಲಿ ತಕ್ಕ ಸರ್ವನಾಮಗಳನ್ನು ತುಂಬಿರಿ.

ದ್ರೌಪದಿ ಪಾಂಡವರ ಹೆಂಡತಿ; ದ್ರೌಪದಿ ದ್ರುಪದರಾಜನ ಮಗಳು.

ಹುಲಿಗೆ ಸಿಟ್ಟು ಬಹಳ; ಹುಲಿ ಕೆಣಕಿದವನನ್ನು ಕೂಡಲೆ ಕೊಂದು ಹಾಕುತ್ತದೆ.

ಜಾತ್ರೆಗೆ ಬಹಳ ಜನರು ಕೂಡಿದ್ದಾರೆ; ಜನರು ದೇವರಿಗೆ ಕಾಯಿ ಒಡೆಸುತ್ತಾರೆ.

ಸಳ ಬಹಳ ಗಟ್ಟಿಗ; ಸಳ ಹುಲಿಯನ್ನು ಇರಿದು ಕೊಂದನು.

ಚಿಗರೆಗಳಿಗೆ ಅಂಜಿಕೆ ಬಹಳ; ಆದರಿಂದ ಚಿಗರೆಗಳು ಗುಂಪಾಗಿ ತಿರುಗುತ್ತವೆ.

ನರಿ ಬಹಳ ಜಾಣ ಪ್ರಾಣಿ; ನರಿ ಎಲ್ಲ ಪ್ರಾಣಿಗಳ ಕೈಯೊಳಗಿಂದಲೂ ಪಾರಾಗುತ್ತದೆ.

ಗೌಡ ತೆರಿಗೆಯನ್ನು ಎತ್ತುತ್ತಾನೆ; ಮತ್ತು ಗೌಡ ತೆರಿಗೆಯನ್ನು ಸರಕಾರಕ್ಕೆ ಕಳಿಸುತ್ತಾನೆ.

(೨) ಕೆಳಗಿನ ಕತೆಯಲ್ಲಿ ಬರುವ ಎಲ್ಲ ಬಗೆಯ ಸರ್ವನಾಮಗಳ ಕೆಳಗೆ ಈ ಗುರುತು ಹಾಕಿರಿ. ಮತ್ತು ಅವು ಯಾವ ಯಾವ ನಾಮಗಳ ಬದಲು ಬಂದಿವೆ ?

ಕೃಷ್ಣ ಬಲು ತುಂಟ ಹುಡುಗ. ಅವನು ಹಗಲೆಲ್ಲ ಜಗಳ ಮಾಡುತ್ತಿದ್ದ ದಾರಿಯಲ್ಲಿ ಜನರಿಗೆ ಅಣಕಿಸುತ್ತಿದ್ದ. ಅವರು ಇವನನ್ನು ಬಯ್ಯುತ್ತಿದ್ದರು. ಗುರುಗಳು ಇದನ್ನು ಕಂಡು - ಕೃಷ್ಣಾ, ನೀನು ಈ ಕೆಟ್ಟ ಗುಣವನ್ನು ಬಿಡು, ಎಂದು ಹೇಳುತ್ತಿದ್ದರು. ಅವರ ಮಾತನ್ನು ಇವನು

ಲೆಕ್ಕಿಸುತ್ತಿದ್ದಿಲ್ಲ. ಅದರಿಂದ ನಾವು ಎಲ್ಲರೂ ಅವನ ಗೆಳೆತನ ಬಿಟ್ಟೆವು. ಅದು ಅವನ ಮನಸಿಗೆ ಹತ್ತಿತು. ಆಗ ಕೃಷ್ಣ—'ನಾನು ಇಂದಿನಿಂದ ಕೆಟ್ಟ ಗುಣಗಳನ್ನು ಬಿಟ್ಟೆ; ಇನ್ನೆಂದೂ ಅವು ನನ್ನಲ್ಲಿ ಕಾಣಲಾರವು. ನೀವು ಮೊದಲಿನಂತೆ ಪ್ರೀತಿಯಿಂದ ಇರಬೇಕು' ಎಂದು ಹೇಳಿಕೊಂಡ.

(೩) ಕೆಳಗಿನ ಮಾತುಗಳಲ್ಲಿ ಗೆರೆ ಹಾಕಿದಲ್ಲಿ ತಕ್ಕ ಸರ್ವನಾಮಗಳನ್ನು ತುಂಬಿರಿ.

ಅಯ್ಯೋ ಶನಿಯೇ—ಏಕೆ ಕಾಡುತ್ತಿರುವೆ? ಅಣ್ಣಾ—ಊರಿಗೆ ಬರುತ್ತೇನೆ. ಅಗಸಗಿತ್ತಿ ಇಂದು ಬರಲಿಲ್ಲ;—ಊರಿಗೆ ಹೋಗಿದ್ದಾಳಂತೆ. ನಮ್ಮ ಕೆಲಸಗಳನ್ನು— —ಮನವಿಟ್ಟು ಮಾಡಬೇಕು ಬೆಳ್ಳಿಯನ್ನು ನಾಣ್ಯಗಳಲ್ಲಿ ಉಪಯೋಗಿಸುತ್ತಾರೆ; ಏಕೆಂದರೆ—ಕಿಲುಬುವದಿಲ್ಲ. ರಾಯರೇ—ಈ ರೀತಿ ಮಾತಾಡಬೇಕೇ? ಹುಡುಗರು ತಪ್ಪದೆ ವ್ಯಾಯಾಮ ಮಾಡಬೇಕು; ಆದರಿಂದ—ಗಟ್ಟಿಯಾಗುತ್ತಾರೆ. ಬೇನೆಗಳಿಗೆ ಬೇಗನೆ ಔಷಧ ಕೊಡಬೇಕು; ಇಲ್ಲವಾದರೆ———ಬೆಳೆದು ಯಾವುದಕ್ಕೂ ಬಗ್ಗುವುದಿಲ್ಲ.

## ಕೇಳಿಕೆ

(೪) ಸರ್ವನಾಮವೆಂದರೇನು?

(೫) ನಾಮಗಳಿಗೂ ಸರ್ವನಾಮಗಳಿಗೂ ಯಾವ ಸಂಬಂಧವಿರುತ್ತಿದೆ;

(೬) ಸರ್ವನಾಮಗಳಿಂದ ಮಾತಿನಲ್ಲಿ ಆಗಿರುವ ಉಪಯೋಗವೇನು?

(೭) ನೀನು, ಅವನು, ಅವಳು, ಅವು, ಅವರು ಈ ಸರ್ವನಾಮಗಳನ್ನು ಉಪಯೋಗಿಸಿ ವಾಕ್ಯಗಳನ್ನು ಮಾಡಿರಿ.

# ೧೦ನೆಯ ಪಾಠ

## ವಿಶೇಷಣಗಳು



| | |
|---|---|
| ೧ ಆನೆಗೆ ಕೋರೆಗಳಿವೆ. | ೧ ಆನೆಗೆ ಬಿಳಿಯ ಕೋರೆಗಳಿವೆ. |
| ೨ ಆನೆಗೆ ಕಾಲುಗಳಿವೆ. | ೨ ಆನೆಗೆ ನಾಲ್ಕು ಕಾಲುಗಳಿವೆ. |
| ೩ ಆನೆಗೆ ಸೊಂಡಿಲು ಇದೆ. | ೩ ಆನೆಗೆ ದೊಡ್ಡ ಸೊಂಡಿಲು ಇದೆ. |
| ೪ ಆನೆಗೆ ಕಣ್ಣುಗಳು ಇವೆ. | ೪ ಆನೆಗೆ ಚಿಕ್ಕ ಕಣ್ಣುಗಳು ಇವೆ. |

ಮೇಲೆ ಮಾತಿನ ಎರಡು ಗುಂಪುಗಳಿವೆ. ಅವುಗಳಲ್ಲಿ ಇರುವ ಹೆಚ್ಚು ಕಡಮೆಯನ್ನು ಹೇಳಿರಿ.

೧ನೆಯ ಮಾತಿನಲ್ಲಿ 'ಆನೆಗೆ ಕೋರೆಗಳಿವೆ' ಎಂಬ ಸಾದಾ ಮಾತು ಇದೆ. ೨ನೆಯ ಗುಂಪಿನಲ್ಲಿ ಆ ಕೋರೆಗಳು ಎಂತಹವು ಎಂಬುದನ್ನು ಬೆಳೆಸಿ ಹೇಳಿದೆ. 'ಕೋರೆ' ನಾಮಪದ. ಅದನ್ನು ಬೆಳೆಸಿ ಹೇಳಿರುವ ಪದ ಯಾವುದು? 'ಬಿಳಿಯ.'

೨ನೆಯ ಮಾತಿನಲ್ಲಿ ಆನೆಯ ಕಾಲುಗಳ ಬಗ್ಗೆ ಸಾದಾ ಮಾತು ಇದೆ. ಆದರ ೨ನೆಯ ಗುಂಪಿನಲ್ಲಿ ಆ ಕಾಲುಗಳು ಎಷ್ಟು ಎಂಬುದನ್ನು ಬೆಳೆಸಿ ಹೇಳಿದೆ. ಕಾಲು ಇದು ಎಂತಹ ಪದ? ಅದನ್ನು ಬೆಳೆಸಿ ಹೇಳಿರುವ ಪದವಾವುದು? 'ನಾಲ್ಕು'.

೩ನೆಯ ೪ನೆಯ ಮಾತುಗಳನ್ನು ಎರಡನೆಯ ಗುಂಪಿನಲ್ಲಿ ಹೇಗೆ ಬೆಳೆಸಿ ಹೇಳಿದೆ? ಅವುಗಳನ್ನು ಬೆಳೆಸಿ ಹೇಳಿರುವ ಪದಗಳಾವುವು?

(೧) ಹೀಗೆ ಬಿಳಿಯ, ನಾಲ್ಕು, ದೊಡ್ಡ, ಚಿಕ್ಕ ಮುಂತಾದ ಶಬ್ದಗಳು ತಮ್ಮ ಮುಂದಿರುವ ನಾಮಗಳನ್ನು ಬೆಳೆಸಿ ಹೇಳುತ್ತವೆ; ಅಥವಾ ಆ ನಾಮಗಳ ಬಗೆಗೆ ಹೆಚ್ಚಿನ ಸಂಗತಿಯನ್ನು ಹೇಳುತ್ತವೆ



| | |
|---|---|
| ೧. ಇದು ಬೆಕ್ಕು | ೧ ಅದು ಕರಿಯ ಬೆಕ್ಕು |
| ೨ ಬೆಕ್ಕಿಗೆ ಬಾಲವಿದೆ. | ೨ ಬೆಕ್ಕಿಗೆ ಉದ್ದವಾದ ಬಾಲವಿದೆ. |
| ೩ ಬೆಕ್ಕಿಗೆ ಕೂದಲುಗಳಿರುತ್ತಿವೆ. | ೩ ಬೆಕ್ಕಿಗೆ ಮೆತ್ತನೆಯ ಕೂದಲುಗಳಿರುತ್ತಿವೆ. |
| ೪ ಬೆಕ್ಕಿಗೆ ಕಿವಿಗಳಿವೆ. | ೪ ಬೆಕ್ಕಿಗ ಎರಡು ಕಿವಿಗಳಿವೆ. |
| ೫ ಬೆಕ್ಕು ಹಾಲು ಕುಡಿದಿದೆ. | ೫ ಬೆಕ್ಕು ತುಸು ಹಾಲು ಕುಡಿದಿದೆ. |

ಎರಡನೆಯ ಗುಂಪಿನಲ್ಲಿ ಬೆಕ್ಕಿನ ವಿಷಯವನ್ನು ಬೆಳಿಸಿ ಹೇಳುವ ಶಬ್ದಗಳಾವುವು ?

ಕುಂಟ ಕುದುರೆ; ಜಾಣ ಹುಡುಗಿ; ಈ ಮನೆಯಲ್ಲಿ ಎಂಟು ಜನರಿದ್ದಾರೆ; ಮಾವಿನ ಮರದಲ್ಲಿ ಬಹಳ ಹಣ್ಣುಗಳು ಇವೆ; ನಮಗೆ ಸೇರು ಸಕ್ಕರೆ ಕೊಡು.

ಇವುಗಳಲ್ಲಿ ಯಾವ ಯಾವ ನಾಮಗಳನ್ನು ಯಾವ ಯಾವ ಶಬ್ದಗಳು ಬೆಳಿಸಿ ಹೇಳುತ್ತಿವೆ.

(೨) ಹಲವು ಶಬ್ದಗಳು ತಮ್ಮ ಮುಂದಿರುವ ನಾಮಗಳ ಗುಣ, ಸಂಖ್ಯೆ, ತೂಕ, ಅಳತೆ ಮೊದಲಾದುವನ್ನು ಬೆಳಿಸಿ ಹೇಳುತ್ತಿವೆ.

**(೨೮) ನಾಮಗಳನ್ನು ಬೆಳಿಸಿ ಹೇಳುವ ಅಥವಾ ನಾಮಗಳ ಬಗೆಗೆ ಹೆಚ್ಚಿನ ಸಂಗತಿಯನ್ನು ಹೇಳುವ ಶಬ್ದಕ್ಕೆ ವಿಶೇಷಣವೆನ್ನುವರು.**

**(೨೯) ವಿಶೇಷಣವು ಯಾವುದನ್ನು ಬೆಳಿಸಿ ಹೇಳುವದೋ ಆ ನಾಮಪದಕ್ಕೆ ವಿಶೇಷ್ಯ ಎನ್ನುವರು.**

## ಬಳಕೆ

(೧) ಮುಂದಿನ ಕತೆಯಲ್ಲಿ ಬರುವ ವಿಶೇಷಣಗಳನ್ನು ಕೆಳಗೆ ಗೆರೆ ಹಾಕಿ ಗುರುತಿಸಿರಿ.

ಒಂದು ಅಡವಿಯಲ್ಲಿ ಒಬ್ಬ ಯತಿ ಇದ್ದನು ಅವನಿಗೆ ಬಹಳ ಜನ ಶಿಷ್ಯರು ಇದ್ದರು. ಅವರಲ್ಲಿ ಶೂರನಾದ ನಳನೂ ಇದ್ದನು. ಒಂದು ದಿವಸ ಅಲ್ಲಿಗೆ ಏಳು ವೆಂಟ್ಸಿನ ಹುಲಿ ಬಂದಿತು. ಅದು ತನ್ನ ದೊಡ್ಡ ಬಾಯನ್ನು ತೆರೆದು ಭಯಂಕರ ಗುಡುಗು ಹಾಕಿತು; ಕೂಡಲೆ ತನ್ನ ಹರಿತವಾದ ಪಂಜರವನ್ನು ಎತ್ತಿತು.

(೨ ಈ ಮಾತಿನಲ್ಲಿ ತೆರವಿದ್ದಲ್ಲಿ ಕೆಳಗಿನ ಗುಂಪಿನೊಳಗಿಂದ ತಕ್ಕ ವಿಶೇಷಣಗಳನ್ನು ಆಯ್ದುಕೊಂಡು ತುಂಬಿರಿ.

ಮುಂಬಯಿ—— ಪಟ್ಟಣ. ಇದು—— ಪುಸ್ತಕ.——ಹುಡುಗರು ಪರೀಕ್ಷೆಯಲ್ಲಿ ಪಾಸಾಗುತ್ತಾರೆ. ಸ್ಕ್ಯಾಟುಗಳು ತಲೆಗೆ——ಪಟಕಾ ಸುತ್ತುತ್ತಾರೆ. ——ರಾಮ——ರಾವಣನನ್ನು ಕೊಂದನು.

ಒಳ್ಳೆಯ, ಜಾಣ, ದೊಡ್ಡ, ಶೂರನಾದ, ನೀಚನಾದ, ಹಸಿರು.

(೩) ೧ನೆಯ ಪ್ರಶ್ನದಲ್ಲಿಯ ವಿಶೇಷ್ಯಗಳನ್ನು ಆಯ್ದು ಬರೆಯಿರಿ.

(೪) ಚಿಕ್ಕ, ಚಪಲ, ಐದು, ಕುರುಡ ಈ ವಿಶೇಷಣಗಳನ್ನಿಟ್ಟು ಒಂದೊಂದು ವಾಕ್ಯವನ್ನು ಮಾಡಿರಿ.

## ಕೇಳಿಕೆ

(೫) ವಿಶೇಷಣವೆಂದರೇನು ? ಮಾತಿನಲ್ಲಿ ಅದರ ಉಪಯೋಗವೇನು ?

(೬) ವಿಶೇಷ್ಯವೆಂದರೇನು ?

(೭) ಕಪಿ, ಸಿಂಹ, ಶಿವಾಜಿ, ಕೊಡ, ಕಲ್ಲು ಇವುಗಳಿಗೆ ತಕ್ಕ ವಿಶೇಷಣಗಳನ್ನು ಜೋಡಿಸಿ ಹೇಳಿರಿ.

(೮) ಎತ್ತರವಾದ, ಬಿಳಿಯ, ಮೂಕ, ಸರಳ ಇವುಗಳಿಗೆ ತಕ್ಕ ವಿಶೇಷ್ಯಗಳನ್ನು ಸೇರಿಸಿ ಹೇಳಿರಿ.

# ೧೧ನೆಯ ಪಾಠ

## ಅವ್ಯಯಗಳು



(೧) ಮಾವಿನ ಮರದ ಕೆಳಗೆ ಒಂದು ಮಂಗ ಕುಳಿತಿದೆ;

ಅದು ಹಣ್ಣುಗಳ ಕಡೆಗೆ ನೋಡುತ್ತಿದೆ

(೨) ದೊಡ್ಡ ಆನೆ ಮರದ ಹರಿಗಳನ್ನು 'ಲಟಲಟನೆ' ಮುರಿದಿದೆ, ಮತ್ತು ಅವುಗಳನ್ನು ರಾಶಿ ಹಾಕಿದೆ



ಈ ವಾಕ್ಯಗಳಲ್ಲಿ ಬಂದಿರುವ ಪದಗಳನ್ನು ಕೆಳಗಿನ ಮನೆಗಳಲ್ಲಿ ತುಂಬಿರಿ.

| ವಾಕ್ಯಗಳ ಅಂಕೆ | ನಾಮ | ಸರ್ವನಾಮ | ವಿಶೇಷಣ | ಕ್ರಿಯಾಪದ | ಉಳಿದುವು |
|---|---|---|---|---|---|
| ೧ | ಮಾವಿನ<br>ಮರದ<br>ಮಂಗ | | ಒಂದು | ಕುಳಿತಿದೆ | ಕೆಳಗೆ |
| | ಹಣ್ಣುಗಳ | ಅದು | | ನೋಡುತ್ತಿದೆ | ಕಡೆಗೆ |
| ೨ | ಆನೆ<br>ಮರದ<br>ಹರಿಗಳನ್ನು | | ದೊಡ್ಡ | ಮುರಿದಿದೆ. | ಲಟಲಟನೆ |
| | ರಾಶಿ | ಅವುಗಳನ್ನು | | ಹಾಕಿದೆ. | ಮತ್ತು |

ಮೇಲೆ ವ್ಯವಸ್ಥೆ ಮಾಡಿರುವುದನ್ನು ಸರಿಯಾಗಿ ನೋಡಿರಿ. ಅದರಲ್ಲಿ ಕೆಲವು ಪದಗಳು 'ಉಳಿದುವು' ಎಂಬ ಮನೆಯಲ್ಲಿ ಬಂದಿವೆ. ಏಕೆ? ಅವು ಈ ವರೆಗೆ ನೀವು ಕಲಿತ ಗುಂಪುಗಳಲ್ಲಿ ಏಕೆ ಸೇರಿಕೊಳ್ಳಲಿಲ್ಲ?

ಈ ಪದಗಳು ಯಾವ ಒಡವೆಯ ಹೆಸರನ್ನೂ ಹೇಳುವುದಿಲ್ಲ; ಅದರಿಂದ ನಾಮಗಳಲ್ಲ. ಯಾವ ನಾಮಗಳ ಬದಲಾಗಿಯೂ ಬಂದಿಲ್ಲ; ಅದರಿಂದ ಸರ್ವನಾಮಗಳಲ್ಲ. ಯಾವ ನಾಮವನ್ನೂ ಬೆಳೆಸಿ-ಬಣ್ಣಿಸಿ-ಹೇಳುವುದಿಲ್ಲ; ಅದರಿಂದ ವಿಶೇಷಣಗಳಲ್ಲ. ಇದರಂತೆ ಯಾವ ಕಲಸವನ್ನೂ ಹೇಳುವುದಿಲ್ಲ; ಅದರಿಂದ ಕ್ರಿಯಾಪದಗಳಲ್ಲ.

(೧) ಕೆಲವು ಪದಗಳು ನಾಮ-ಸರ್ವನಾಮ-ವಿಶೇಷಣ-ಕ್ರಿಯಾಪದ ಈ ಯಾವ ಗುಂಪಿನಲ್ಲಿಯೂ ಸೇರುವುದಿಲ್ಲ.

ಮನೆಯ ಸುತ್ತಲೂ ಗೋಡೆಗಳನ್ನು ಕಟ್ಟುತ್ತಾರೆ; ಅದರಿಂದ ಅವುಗಳ ಒಳಗೆ ದನಕರುಗಳು ಬರುವುದಿಲ್ಲ. ನೀರನ್ನು ಮಣ್ಣಿನ ಕೊಡದ ಒಳಗೆ ಹಾಕುತ್ತಾರೆ; ಅದರಿಂದ ಅವು ತಣ್ಣಗೆ ಆಗುತ್ತಿವೆ.

ಈ ವಾಕ್ಯಗಳೊಳಗಿನ ಪದಗಳನ್ನು ಮೇಲಿನಂತೆ ಮನೆ ಮಾಡಿ ತುಂಬಿರಿ. ಮತ್ತು 'ಉಳಿದುವು' ಎಂಬ ಮನೆಯಲ್ಲಿ ಬರುವ ಪದಗಳನ್ನು ಹೇಳಿರಿ.

ಸುತ್ತಲೂ, ಅದರಿಂದ-ಇದರಂತೆ ಉಳಿದವುಗಳನ್ನು ಹೇಳಿರಿ.

ಇವು ನಾಮ ಮೊದಲಾದ ಗುಂಪಿನಲ್ಲಿ ಸೇರುತ್ತಿವೆಯೇ? ಇಲ್ಲ. ಏಕೆ? ಹೀಗೆಯೇ 'ಆದರೆ, ಏಕೆಂದರೆ, ಆಗಲಿ, ಥೊಪ್ಪನೆ, ಅಯ್ಯೋ, ಸಳಸಳ' ಮುಂತಾದ ಪದಗಳು ಮೊದಲಿನ ನಾಲ್ಕು ಭಾಗಗಳಲ್ಲಿ ಏಕೆ ಸೇರಿಕೊಳ್ಳುವುದಿಲ್ಲ? ಎಂಬುದನ್ನು ತಿಳಿಸಿರಿ.

**(೩೦) ನಾಮ, ಸರ್ವನಾಮ, ವಿಶೇಷಣ, ಕ್ರಿಯಾಪದ ಇವುಗಳನ್ನು ಬಿಟ್ಟು ಉಳಿದ ಪದಗಳಿಗೆ ಅವ್ಯಯ ಎನ್ನುವರು.**

**ಬಳಕೆ**

ಈ ದಾರಿ ನೆಟ್ಟಗೆ ಹೋಗಿದೆ. ಕಟ್ಟಿಗೆ ಛಟಛಟ ಮುರಿಯಿತು. ದಾರಿಯಲ್ಲಿ ಹೋಗುವಾಗ ಸುತ್ತಲೂ ಲಕ್ಷ್ಯವಿರಲಿ ಅವನು ಹೀಗೆ ಹೇಳಿದನೇ ? ಆಹಾರವನ್ನು ಚೆನ್ನಾಗಿ ಅಗಿದು ನುಂಗಬೇಕು ಹಸಿ ಬಹಳ ಬೆಚ್ಚಗೆ ಇದೆ.

(೨) ಕೆಳಗಿನ ವಾಕ್ಯಗಳೊಳಗೆ ಗೆರೆ ಹಾಕಿದಲ್ಲಿ ಕೆಳಗೆ ತೋರಿಸಿದ ಗುಂಪಿನೊಳಗಿಂದ ತಕ್ಕ ಅವ್ಯಯಗಳನ್ನು ಆರಿಸ್ಕೊಂಡು ತುಂಬಿರಿ.

ಸೀತಾದೇವಿಯು—— ರಾಕ್ಷಸರ ಕಾವಲು ಇದ್ದಿತು ಸೂರ್ಯ—— ಹೊಳೆಯುತ್ತಾನೆ. ಕುದುರೆ—ನಡೆಯುತ್ತಿದೆ. ಅವಳು ಆನೆಯಂತೆ— ನಡೆಯುತ್ತಾಳೆ. ದ್ರೋಣಾಚಾರ್ಯರು ——— ಗುರಿ ಹೊಡೆಯುತ್ತಿದ್ದರು. ನೀನು ಮೊದಲೇ——— ಎಂದು ಏಕೆ ಹೇಳಲಿಲ್ಲ ? ಹಾವು ಕಡಿದ ಕೂಡಲೆ —— ಸತ್ತೆ; ಎಂದು ಒದರಿದನು

ತಪ್ಪದೆ, ಹೀಗೆ, ಅಯ್ಯೋ, ಲುಟುಲುಟು, ಲಕಲಕ, ಸುತ್ತಲೂ, ಮೆಲ್ಲನೆ

**ಕೇಳಿಕೆ**

(೩) ಅವ್ಯಯ ಎಂದರೇನು ?

(೪) ಅವ್ಯಯುಗಳು ಹಿಂದೆ ಹೇಳಿದ ಯಾವ ಪದಗಳ ಗುಂಪಿನಲ್ಲಿ ಯಾದರೂ ಬರುತ್ತಿವೆಯೋ ? ಇಲ್ಲವಾಗಿದ್ದರೆ, ಏಕೆ ಬರುವದಿಲ್ಲ ?—

---

# ೧೨ನೆಯ ಪಾಠ

## ನಾಮಗಳ ಲಿಂಗ ಮತ್ತು ವಚನ

ಕೆಳಗಿನ ಮಾತುಗಳಲ್ಲಿಯ ನಾಮಪದಗಳನ್ನು ಗುರುತಿಸಿರಿ.

ರಂಗಪ್ಪ ಬಂದನು. ಉಂಡಿಯನ್ನು ಒಯ್ದರು. ಗಿರಿಜೆ ಉಣ್ಣು ತ್ತಾಳೆ. ಒಕ್ಕಲಿಗ ಎದ್ದನು. ಆಕಳನ್ನು ಬಡಿಯಬೇಡ. ಅಪ್ಪ ಬರೆಯು ತ್ತಾನೆ. ಅಕ್ಕ ಎಲ್ಲಿದ್ದಾಳೆ?

ಮೇಲಿನ ಮಾತುಗಳಲ್ಲಿ ಬಂದ ನಾಮಪದಗಳಲ್ಲಿ 'ರಂಗಪ್ಪ' ಇದು ಯಾರ ಹೆಸರನ್ನು ಹೇಳುತ್ತಿದೆ? ಒಬ್ಬ ಮನುಷ್ಯನ ಹೆಸರನ್ನು; ಅದರಲ್ಲಿಯೂ ಗಂಡುಸಿನ ಹೆಸರನ್ನು. 'ಒಕ್ಕಲಿಗ, ಅಪ್ಪ' ಇವೂ ಗಂಡುಸರ ಹೆಸರನ್ನೇ ಹೇಳುತ್ತಿವೆ. ಇದರಂತೆಯೇ 'ಗಿರಿಜೆ, ಅಕ್ಕ' ಇವು ಹೆಂಗುಸರ ಹೆಸರು ಗಳನ್ನೂ, 'ಉಂಡಿ, ಆಕಳು' ಇವು ಗಂಡುಸು, ಹೆಂಗುಸು ಇವರನ್ನು ಬಿಟ್ಟು ಉಳಿದ ಒಡವೆಗಳ ಹೆಸರನ್ನೂ ಹೇಳುತ್ತಿವೆ.

(೧) ನಮ್ಮ ಮಾತಿನಲ್ಲಿ ಕೆಲವು ಶಬ್ದಗಳು ಗಂಡುಸರ ಹೆಸರುಗಳನ್ನು ಹೇಳುತ್ತಿವೆ; ಕೆಲವು ಹೆಂಗುಸರ ಹೆಸರುಗಳನ್ನು ಹೇಳುತ್ತಿವೆ. ಹಲವು ಶಬ್ದ ಗಳು ಗಂಡುಸು, ಹೆಂಗುಸರನ್ನು ಬಿಟ್ಟು ಉಳಿದ ಎಲ್ಲ ಒಡವೆಗಳ ಹೆಸರು ಗಳನ್ನು ಹೇಳುತ್ತಿವೆ.

ನೇಕಾರ ಪಂಜೆಗಳನ್ನು ನೇಯುತ್ತಾನೆ. ದಾಸಿ ಗಾಡಿಯನ್ನು ದೂಡು ತ್ತಾಳೆ. ಹಾವುಗಾರ ಹಾವುಗಳನ್ನು ಆಡಿಸುತ್ತಾನೆ. ಕುದುರೆ ಕಡಲೆಯನ್ನು ತಿನ್ನುತ್ತಿದೆ.

ಮೇಲಿನ ಮಾತುಗಳಲ್ಲಿ ಗಂಡುಸರ, ಹೆಂಗುಸರ, ಉಳಿದ ಒಡವೆಗಳ ಹೆಸರುಗಳನ್ನು ಹೇಳುವ ನಾಮಪದಗಳನ್ನು ಬೇರೆ ಬೇರೆ ಮಾಡಿರಿ. ಈ ಮೂರೂ ಗುಂಪುಗಳಲ್ಲಿಯೂ ನಿಮಗೆ ಗೊತ್ತಿದ್ದ ಅದೇ ಜಾತಿಯ ಬೇರೆ ಎರ ಡೆರಡು ನಾಮಪದಗಳನ್ನು ಸೇರಿಸಿ ಬರೆಯಿರಿ.

(೩೧) **ಗಂಡುಸರ ಹೆಸರು ಹೇಳುವ ನಾಮಗಳು ಪುಲ್ಲಿಂಗದ ನಾಮಗಳು.**

ಈ ದಾರಿ ನೆಟ್ಟಗೆ ಹೋಗಿದೆ. ಕಟ್ಟಿಗೆ ಛಟಛಟ ಮುರಿಯಿತು. ದಾರಿಯಲ್ಲಿ ಹೋಗುವಾಗ ಸುತ್ತಲೂ ಲಕ್ಷ್ಯವಿರಲಿ. ಅವನು ಹೀಗೆ ಹೇಳಿದನೇ ? ಆಹಾರವನ್ನು ಚೆನ್ನಾಗಿ ಅಗಿದು ನುಂಗಬೇಕು ಹಸಿ ಬಹಳ ಬೆಚ್ಚಗೆ ಇದೆ.

(೨) ಕೆಳಗಿನ ವಾಕ್ಯಗಳೊಳಗೆ ಗೆರೆ ಹಾಕಿದಲ್ಲಿ ಕೆಳಗೆ ತೋರಿಸಿದ ಗುಂಪಿನೊಳಗಿಂದ ತಕ್ಕ ಅವ್ಯಯಗಳನ್ನು ಆಯ್ದುಕೊಂಡು ತುಂಬಿರಿ.

ಸೀತಾದೇವಿಯು—– ರಾಕ್ಷಸರ ಕಾವಲು ಇದ್ದಿತು. ಸೂರ್ಯ—— ಹೊಳೆಯುತ್ತಾನೆ. ಕುದುರೆ—ನಡೆಯುತ್ತಿದೆ. ಅವಳು ಆನೆಯಂತೆ— ನಡೆಯುತ್ತಾಳೆ. ದ್ರೋಣಾಚಾರ್ಯರು –——- ಗುರಿ ಹೊಡೆಯುತ್ತಿದ್ದರು. ನೀನು ಮೊದಲೇ- —ಎಂದು ಏಕೆ ಹೇಳಲಿಲ್ಲ? ಹಾವು ಕಡಿದ ಕೂಡಲೆ — –ಸತ್ತೆ; ಎಂದು ಒದರಿದನು

ತಪ್ಪದೆ, ಹೀಗೆ, ಅಯ್ಯೋ, ಲುಟುಲುಟು, ಲಕಲಕ, ಸುತ್ತಲೂ, ಮೆಲ್ಲನೆ

**ಕೇಳಿಕೆ**

(೩) ಅವ್ಯಯ ಎಂದರೇನು ?

(೪) ಅವ್ಯಯಗಳು ಹಿಂದೆ ಹೇಳಿದ ಯಾವ ಪದಗಳ ಗುಂಪಿನಲ್ಲಿ ಯಾದರೂ ಬರುತ್ತಿವೆಯೋ ? ಇಲ್ಲವಾಗಿದ್ದರೆ, ಏಕೆ ಬರುವದಿಲ್ಲ ?—

# ೧೨ನೆಯ ಪಾಠ

## ನಾಮಗಳ ಲಿಂಗ ಮತ್ತು ವಚನ

ಕೆಳಗಿನ ಮಾತುಗಳಲ್ಲಿಯ ನಾಮಪದಗಳನ್ನು ಗುರುತಿಸಿರಿ.

ರಂಗಪ್ಪ ಬಂದನು. ಉಂಡಿಯನ್ನು ಒಯ್ದರು. ಗಿರಿಜೆ ಉಣ್ಣುತ್ತಾಳೆ. ಒಕ್ಕಲಿಗ ಎದ್ದನು. ಆಕಳನ್ನು ಬಡಿಯಬೇಡ. ಅಪ್ಪ ಬರೆಯುತ್ತಾನೆ. ಅಕ್ಕ ಎಲ್ಲಿದ್ದಾಳೆ?

ಮೇಲಿನ ಮಾತುಗಳಲ್ಲಿ ಬಂದ ನಾಮಪದಗಳಲ್ಲಿ 'ರಂಗಪ್ಪ' ಇದು ಯಾರ ಹೆಸರನ್ನು ಹೇಳುತ್ತದೆ? ಒಬ್ಬ ಮನುಷ್ಯನ ಹೆಸರನ್ನು; ಅದರಲ್ಲಿಯೂ ಗಂಡುಸಿನ ಹೆಸರನ್ನು. 'ಒಕ್ಕಲಿಗ, ಅಪ್ಪ' ಇವೂ ಗಂಡುಸರ ಹೆಸರನ್ನೇ ಹೇಳುತ್ತವೆ. ಇದರಂತೆಯೇ 'ಗಿರಿಜೆ, ಅಕ್ಕ' ಇವು ಹೆಂಗುಸರ ಹೆಸರುಗಳನ್ನೂ, 'ಉಂಡಿ, ಆಕಳು' ಇವು ಗಂಡುಸು, ಹೆಂಗುಸು ಇವರನ್ನು ಬಿಟ್ಟು ಉಳಿದ ಒಡವೆಗಳ ಹೆಸರನ್ನೂ ಹೇಳುತ್ತವೆ.

(೧) ನಮ್ಮ ಮಾತಿನಲ್ಲಿ ಕೆಲವು ಶಬ್ದಗಳು ಗಂಡುಸರ ಹೆಸರುಗಳನ್ನು ಹೇಳುತ್ತವೆ; ಕೆಲವು ಹೆಂಗುಸರ ಹೆಸರುಗಳನ್ನು ಹೇಳುತ್ತವೆ. ಹಲವು ಶಬ್ದಗಳು ಗಂಡುಸು, ಹೆಂಗುಸರನ್ನು ಬಿಟ್ಟು ಉಳಿದ ಎಲ್ಲ ಒಡವೆಗಳ ಹೆಸರುಗಳನ್ನು ಹೇಳುತ್ತವೆ.

ನೇಕಾರ ಪಂಜೆಗಳನ್ನು ನೇಯುತ್ತಾನೆ. ದಾಸಿ ಗಾಡಿಯನ್ನು ದೂಡುತ್ತಾಳೆ. ಹಾವುಗಾರ ಹಾವುಗಳನ್ನು ಆಡಿಸುತ್ತಾನೆ. ಕುದುರೆ ಕಡಲೆಯನ್ನು ತಿನ್ನುತ್ತದೆ.

ಮೇಲಿನ ಮಾತುಗಳಲ್ಲಿ ಗಂಡುಸರ, ಹೆಂಗುಸರ, ಉಳಿದ ಒಡವೆಗಳ ಹೆಸರುಗಳನ್ನು ಹೇಳುವ ನಾಮಪದಗಳನ್ನು ಬೇರೆ ಬೇರೆ ಮಾಡಿರಿ. ಈ ಮೂರೂ ಗುಂಪುಗಳಲ್ಲಿಯೂ ನಿಮಗೆ ಗೊತ್ತಿದ್ದ ಅವೇ ಜಾತಿಯ ಬೇರೆ ಎರಡೆರಡು ನಾಮಪದಗಳನ್ನು ಸೇರಿಸಿ ಬರೆಯಿರಿ.

**(೩೧) ಗಂಡುಸರ ಹೆಸರು ಹೇಳುವ ನಾಮಗಳು ಪುಲ್ಲಿಂಗದ ನಾಮಗಳು.**

**(೩೨) ಹೆಂಗುಸರ ಹೆಸರು ಹೇಳುವ ನಾಮಗಳು ಸ್ತ್ರೀಲಿಂಗದ ನಾಮಗಳು.**

**(೩೩) ಗಂಡುಸು, ಹೆಂಗುಸು ಇವರನ್ನು ಬಿಟ್ಟು ಉಳಿದ ಎಲ್ಲ ಒಡವೆಗಳ ಹೆಸರುಗಳನ್ನು ಹೇಳುವ ಪದಗಳು ನಪುಂಸಕಲಿಂಗದ ನಾಮಗಳು. (ಲಿಂಗ ಅಂದರೆ ಕುರುಹು ಅಥವಾ ಗುರುತು.)**

### ಬಳಕೆ

(೧) ಗಾಣಿಗ ಎಣ್ಣೆಯನ್ನು ಮಾರುತ್ತಾನೆ. ಅಣ್ಣ ಪುಸ್ತಕವನ್ನು ಓದಿದನು; ಸೀತೆ ಹೊಳೆಗೆ ಹೋಗುವಳು. ಚೇಳು ಜಂತೆಯಲ್ಲಿ ನೇರಿತು. ಗಿಳಿ ಓದುತ್ತಿದೆ.

ಈ ಮಾತುಗಳಲ್ಲಿ ಬೇರೆ ಬೇರೆ ಲಿಂಗಗಳ ನಾಮಪದಗಳನ್ನು ವಿಂಗಡಿಸಿ, ಅವು ಯಾವ ಯಾವ ಲಿಂಗದ ಪದಗಳೆಂಬುದನ್ನು ಹೇಳಿರಿ.

(೨) ಕೆಳಗೆ ಬರೆದ ಉತ್ತರದಲ್ಲಿ ತಪ್ಪು, ಒಪ್ಪುಗಳನ್ನು ಹೇಳಿರಿ; ಮತ್ತು ತಪ್ಪಾಗಿದ್ದರೆ ಯಾಕೆ ಎಂಬುದನ್ನು ಹೇಳಿರಿ.

ಹೋರಿ (ಪುಲ್ಲಿಂಗ), ಮಗ (ನಪುಂಸಕಲಿಂಗ), ಆಕಳು (ಸ್ತ್ರೀಲಿಂಗ)

### ಕೇಳಿಕೆ

(೩) ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗದ ನಾಮಗಳೆಂದರೇನು ? ಎರಡೆರಡು ಉದಾಹರಣ ಕೊಡಿರಿ.

---

# ೧೩ನೆಯ ಪಾಠ

## ನಾಮಪದಗಳ ವಚನ

| | | |
|---|---|---|
| **ಉಪ್ಪಾರ** ಬಂದನು. | — | **ಉಪ್ಪಾರರು** ಬಂದರು. |
| **ಕೊಡಲಿಯಿಂದ** ಕಡಿದನು. | — | **ಕೊಡಲಿಗಳಿಂದ** ಕಡಿದರು. |
| **ಜಂಗಮನಿಗೆ** ಕೊಟ್ಟನು. | — | **ಜಂಗಮರಿಗೆ** ಕೊಟ್ಟರು. |
| **ಮನೆಯಲ್ಲಿ** ಇದೆ. | — | **ಮನೆಗಳಲ್ಲಿ** ಇವೆ. |

ಮೇಲಿನ ವಾಕ್ಯಗಳನ್ನು ಓದಿರಿ. ಮೊದಲನೆಯ ಗುಂಪಿನ ದಪ್ಪಕ್ಷರದ ಪದಗಳು ಎಂತಹ ಪದಗಳು ? ಅವು ಎಷ್ಟು ವಸ್ತುವನ್ನು ಹೇಳುತ್ತಿವೆ ? ಒಂದು ವಸ್ತುವನ್ನು. ಎರಡನೆಯ ಗುಂಪಿನಲ್ಲಿಯ ನಾಮಪದಗಳು ಒಂದಕ್ಕಿಂತ ಹೆಚ್ಚು ಎಂದರೆ ಎರಡು ಅಥವಾ ಬೇಕಾದಷ್ಟು ಎಂದು ತಿಳಿಸುತ್ತಿವೆ.

(೧) ನಮ್ಮ ಮಾತಿನಲ್ಲಿ ಕೆಲವು ನಾಮಪದಗಳು ಒಂದೇ ವಸ್ತುವನ್ನು ಹೇಳುತ್ತಿವೆ.

ಕೆಲವು ನಾಮಪದಗಳು ಎರಡು ಅಥವಾ ಹಲವು ವಸ್ತುಗಳನ್ನು ಹೇಳುತ್ತಿವೆ.

ಅಕ್ಕಸಾಲಿಗ ಮುರುವುಗಳನ್ನು ಚುಚ್ಚಿದನು. ಹುಡುಗಿ ಹಣ್ಣುಗಳನ್ನು ಆರಿಸುತ್ತಾಳೆ. ಬೀಗರು ಬರುತ್ತಾರೆ. ಚಿಕ್ಕೆಗಳು ಮುಗಿಲಿನಲ್ಲಿ ಹೊಳೆಯುತ್ತಿವೆ.

ಮೇಲಿನ ಮಾತುಗಳಲ್ಲಿಯ ಒಂದು ವಸ್ತುವನ್ನು ಹೇಳುವ ಮತ್ತು ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಹೇಳುವ ನಾಮಪದಗಳನ್ನು ಬೇರೆ ಬೇರೆ ಮಾಡಿರಿ. ಅಂಥವೇ ಬೇರೆ ಕೆಲವು ನಿಮಗೆ ಗೊತ್ತಿದ್ದ ಪದಗಳನ್ನು ಅವಕ್ಕೆ ಸೇರಿಸಿರಿ.

**(೨ಅ) ಒಂದು ವಸ್ತುವನ್ನು ಹೇಳುವ ಪದಕ್ಕೆ ಏಕವಚನದ ಪದವೆಂದೂ ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ತಿಳಿಸುವ ಪದಕ್ಕೆ ಬಹುವಚನ ಅಥವಾ ಅನೇಕ ವಚನದ ಪದವೆಂದೂ ಹೆಸರು. (ಏಕ = ಒಂದು; ಬಹು, ಅನೇಕ = ಬಹಳ, ಒಂದಕ್ಕಿಂತ ಹೆಚ್ಚು)**

## ಬಳಕೆ

(೧) ಹುಡುಗರು ಆಡುತ್ತಾರೆ. ದನ ಮೇಯುತ್ತಿದೆ. ಕಸುಗಾಯಿಗಳನ್ನು ತಿನ್ನಬೇಡ. ಕೆರೆಯಲ್ಲಿ ಮೀನಗಳು ಇವೆ. ಅಂಗಡಿಕಾರರು ಸಂತೆಯಲ್ಲಿ ಬಂದಿರುತ್ತಾರೆ. ಕಾಗೆಗಳಿಗೆ ಕೋಗಿಲೆಯ ಮೇಲೆ ಸಿಟ್ಟು ಬಹಳ. ಕಂಸ ದೇವಕೀಯ ಏಳು ಕೂಸುಗಳನ್ನು ಕೊಂದನು. ಭಟ್ಟಂಗಿಗಳು ರಾಜನನ್ನು ಹೊಗಳಿದರು.

ಈ ವಾಕ್ಯಗಳಲ್ಲಿ ಏಕವಚನ ಅನೇಕ ವಚನಗಳ ನಾಮಪದಗಳನ್ನು ಬೇರೆ ಮಾಡಿರಿ.

(೨) ಮನುಷ್ಯರು, ಕೈಗಳಲ್ಲಿ, ಅಡವಿಗಳಿಂದ, ಗುಂಪುಗಳನ್ನು, ಹೆಂಗುಸರೇ, ಲೆಕ್ಕಣಿಕೆಯನ್ನು, ಬೆರಳಿನಿಂದ, ಕಲ್ಲಿನಲ್ಲಿ, ಬಳ್ಳಿಯಿಂದ, ಹುಡುಗನೇ.

ಈ ಪದಗಳಲ್ಲಿ ಏಕವಚನದ ಪದಗಳನ್ನು ಬಹುವಚನ ಮಾಡಿರಿ. ಹಾಗು ಬಹುವಚನದವುಗಳನ್ನು ಏಕವಚನದ ಪದಗಳನ್ನು ಮಾಡಿ ಬರೆಯಿರಿ.

## ಕೇಳಿಕೆ

(೩) ವಸ್ತುಗಳ ಸಂಖ್ಯೆಯನ್ನು ಹೇಳುವ ವಿಷಯದಲ್ಲಿ ನಾಮಪದಗಳಲ್ಲಿ ಮುಖ್ಯವಾಗಿ ಎಷ್ಟು ಗುಂಪುಗಳನ್ನು ಮಾಡಿರುವರು ? ಯಾವವು ?

(೪) ಏಕವಚನ, ಅನೇಕ ವಚನಗಳೆಂದರೇನು ? ಉದಾಹರಣ ಕೊಟ್ಟು ಹೇಳಿರಿ.

---

# ೧೪ನೆಯ ಪಾಠ

## ಕ್ರಿಯಾಪದಗಳ ಲಿಂಗ ಮತ್ತು ವಚನ

| | | |
|---|---|---|
| ಹುಡುಗ **ಬಂದನು.** | — | ಹುಡುಗರು **ಬಂದರು.** |
| ಮನುಷ್ಯ **ಹೋಗುತ್ತಾನೆ.** | — | ಮನುಷ್ಯರು ಹೋಗುತ್ತಾರೆ. |
| ಹುಡುಗಿ **ಬಂದಳು.** | — | ಹುಡುಗಿಯರು **ಬಂದರು.** |
| ಕಲ್ಲು **ಬಿದ್ದಿತು.** | — | ಕಲ್ಲುಗಳು **ಬಿದ್ದವು.** |
| ಪಟ **ಏರುವುದು.** | — | ಪಟಗಳು **ಏರುವುವು.** |

ದಪ್ಪಕ್ಷರದಲ್ಲಿ ಬರೆದ ಪದಗಳನ್ನು ನೋಡಿರಿ. ಇವು ಎಂತಹ ಪದಗಳು ? ಕ್ರಿಯಾಪದಗಳು. ಬಂದನು ಎಂದರೆ ಗಂಡುಸೋ ಹೆಂಗುಸೋ ? ಗಂಡುಸು, ಎಂದರೆ ಪುಲ್ಲಿಂಗ. ಮತ್ತು ಒಬ್ಬನೋ, ಹಲವರೋ ? ಒಬ್ಬನು, ಎಂದರೆ ಏಕವಚನ. ಇದರಂತೆ ಬಂದರು ಎಂದರೆ ಗಂಡುಸರೋ, ಹೆಂಗುಸರೋ ? ಗಂಡುಸರು. (ಒಮ್ಮೊಮ್ಮೆ ಇಬ್ಬರೂ ಆಗಬಹುದು.) ಮತ್ತು ಒಬ್ಬರೋ, ಹಲವರೋ ? ಹಲವರು; ಆದ್ದರಿಂದ ಬಹುವಚನ.

ಇನ್ನು ಇವುಗಳ ಕರ್ತೃಗಳನ್ನು ನೋಡಿರಿ.

| | | | | | |
|---|---|---|---|---|---|
| ಬಂದನು | ಇದರ | ಕರ್ತೃ | ಹುಡುಗ | ಪುಲ್ಲಿಂಗ | ಏಕವಚನ. |
| ಬಂದರು | ,, | ,, | ಹುಡುಗರು | ಪುಲ್ಲಿಂಗ | ಬಹುವಚನ. |

ಈ ವಾಕ್ಯಗಳಲ್ಲಿ ಕರ್ತೃವಿನ ಲಿಂಗ, ಮತ್ತು ವಚನಗಳೇ ಅವುಗಳ ಕ್ರಿಯಾಪದಗಳಿಗೂ ಇದ್ದದ್ದು ಗೊತ್ತಾಗುವದು. ಇದೇ ಮೇರೆಗೆ ಉಳಿದ ವಾಕ್ಯಗಳ ಕರ್ತೃ, ಹಾಗು ಕ್ರಿಯಾಪದಗಳ ಲಿಂಗ, ಮತ್ತು ವಚನಗಳನ್ನು ಒರೆಹಚ್ಚಿ ನೋಡಿರಿ.

**(೩೫) ನಮ್ಮ ಮಾತಿನಲ್ಲಿ ಬರುವ ಕ್ರಿಯಾಪದಗಳೆಲ್ಲ ಅವುಗಳ ಕರ್ತೃಗಳು ಹೇಳುವ ಲಿಂಗ ಮತ್ತು ವಚನಗಳನ್ನೇ ಹೇಳುತ್ತಿವೆ.**

ಕಮ್ಮಾರರು ಕಬ್ಬಿಣವನ್ನು ಕಾಯಿಸುತ್ತಾರೆ. ಮುದುಕಿ ಬಿದ್ದಳು. ರಾಜ ಏಳುವನು. ಹೊಳೆಗಳು ಹರಿಯುವವು. ಮುತ್ತೈದೆಯರು ಹಾಡುತ್ತಾರೆ.

## ಪೂರ್ಣ ವಿರಾಮ (.)

ನನ್ನ ತಂದೆ ನನಗೆ ಒಂದು ಅಂಗಿಯನ್ನು ಹೊಲಿಸಿದ್ದಾನೆ ಅದು ಬಹಳ ಚೆಂದವಿದೆ ಅದನ್ನು ಈಗ ಪೆಟ್ಟಿಗೆಯಲ್ಲಿ ಇಟ್ಟಿದ್ದೇನೆ ನಾಳೆ ಹಬ್ಬಕ್ಕೆ ಅದನ್ನು ತೊಟ್ಟುಕೊಳ್ಳುತ್ತೇನೆ

ನನ್ನ ತಂದೆ ನನಗೆ ಒಂದು ಅಂಗಿಯನ್ನು ಹೊಲಿಸಿದ್ದಾನೆ। ಅದು ಬಹಳ ಚೆಂದವಿದೆ। ಅದನ್ನು ಈಗ ಪೆಟ್ಟಿಗೆಯಲ್ಲಿ ಇಟ್ಟಿದ್ದೇನೆ। ನಾಳೆ ಹಬ್ಬಕ್ಕೆ ಅದನ್ನು ತೊಟ್ಟುಕೊಳ್ಳುತ್ತೇನೆ।

ಮೇಲೆ ಒಂದೇ ಪರಿಚ್ಛೇದವನ್ನು ಎರಡು ರೀತಿಯಲ್ಲಿ ಬರೆದಿದೆ. ಮೊದಲಿನದನ್ನು ಒಂದೇ ಸವನೆ ಓದಿ ನೋಡಿರಿ. ಎರಡನೆಯದನ್ನು (।) ಈ ಗೆರೆ ಇದ್ದಲ್ಲಿ ತಡೆತಡೆದು ಓದಿರಿ. ಹೇಗೆ ಓದುವದರಿಂದ ನಿಮಗೆ ಅರ್ಥ ಸರಿಯಾಗಿ ತಿಳಿಯುತ್ತಿದೆ? (।) ಈ ಗುರುತು ಇದ್ದಲ್ಲಿ ತಡೆತಡೆದು ಓದುವದರಿಂದ (।) ಈ ಗುರುತು ಇದ್ದಲ್ಲಿ ಒಂದೊಂದು ಮಾತು ಮುಗಿದಿದೆ; ಅಥವಾ ವಾಕ್ಯವಾಗಿದೆ. ಆದರೆ ನಿಮ್ಮ ಹೊತ್ತಿಗೆಗಳಲ್ಲಿ ವಾಕ್ಯ ಮುಗಿದಿದೆ ಎಂದು ತೋರಿಸುವುದಕ್ಕೆ (।) ಈ ಗುರುತಿನ ಬದಲು (.) ಹೀಗೆ ಸಣ್ಣದೊಂದು ಚಿಕ್ಕೆಯನ್ನು ಹಾಕಿರುತ್ತಾರೆ. ನೋಡಿಕೊಳ್ಳಿರಿ.

**(೩೯) ವಾಕ್ಯ ಮುಗಿದಿದೆ ಎಂದು ತೋರಿಸುವುದಕ್ಕೆ (ಮುಗಿದಲ್ಲಿ) (.) ಈ ಗುರುತನ್ನು ಹಾಕುತ್ತಾರೆ. ಇದು ಪೂರ್ಣ ವಿರಾಮ ಚಿಹ್ನ. ಈ ಚಿಹ್ನವಿದ್ದಲ್ಲಿ ದನಿಯುನ್ನು ಪೂರಾ ಇಳಿಸಿ ನಿಲ್ಲಿಸಬೇಕು.**

## ಪ್ರಶ್ನ ಚಿಹ್ನ (?)

ತಮ್ಮಾ, ನಿನಗೆ ಎಷ್ಟು ವರುಷಗಳಾಗಿವೆ? ನೀನು ಯಾವಾಗ ಬಂದೆ? ಈ ಹೊತ್ತಿಗೆಗೆ ಬೆಲೆ ಎಷ್ಟು? ಅವನು ಎಲ್ಲಿಗೆ ಹೋದನು?

ಈ ಎಲ್ಲ ವಾಕ್ಯಗಳನ್ನು ಓದಿರಿ. ಇವುಗಳಲ್ಲಿ ಒಬ್ಬನು ಮತ್ತೊಬ್ಬನಿಂದ ಏನನ್ನಾದರೂ ಕೇಳಿ ತಿಳಿದುಕೊಳ್ಳುವ ವಿಚಾರವಿದೆ. ಇಂತಹ ವಾಕ್ಯಗಳ ಕೊನೆಗೆ (**?**) ಈ ಚಿಹ್ನ ಬರುತ್ತಿದೆ. ನೀವು ಯಾವ ತರಗತಿಯಲ್ಲಿ ಓದುತ್ತೀರಿ? ನಾಳೆ ಊರಿಗೆ ಹೋಗುವೆಯಾ? ಈ ವಾಕ್ಯಗಳ ಅರ್ಥವನ್ನೂ, ಅವುಗಳ

ಮುಂದೆ (?) ಈ ಚಿಹ್ನವನ್ನು ಏಕೆ ಹಾಕಿದೆಯೆಂಬುದನ್ನೂ ಸರಿಯಾಗಿ ತಿಳಿದುಕೊಳ್ಳಿರಿ.

**(೪೦) ಮತ್ತೊಬ್ಬರಿಂದ ಏನನ್ನಾದರೂ ತಿಳಿದುಕೊಳ್ಳುವುದಕ್ಕೆ ಕೇಳುವ ವಾಕ್ಯಗಳ ಮುಂದೆ (?) ಈ ಚಿಹ್ನವನ್ನು ಹಾಕುತ್ತಾರೆ. ಇದು ಪ್ರಶ್ನಚಿಹ್ನ. (ಪ್ರಶ್ನೆ–ಕೇಳುವ) ಈ ಚಿಹ್ನವಿದ್ದ ವಾಕ್ಯವನ್ನು ತುಸು ಒತ್ತಿಯೇ ಓದಬೇಕು.**

**ಅವತರಣ ಚಿಹ್ನ ( “ ” )**

“ ದುಡಿತ ದುಡ್ಡಿನ ತಾಯಿ ” ಎಂದು ಹಿರಿಯರು ಹೇಳುತ್ತಾರೆ. ಆಗ ಪರಶುರಾಮನು “ ನಿನ್ನ ವಿದ್ಯೆಯೆಲ್ಲ ಹಾಳಾಗಿ ಹೋಗಲಿ ” ಎಂದು ಕರ್ಣನಿಗೆ ಶಾಪ ಕೊಟ್ಟನು. “ ಕಾಯಕವೆ ಕೈಲಾಸ ” ಎಂದು ಬಸವಣ್ಣನವರು ಹೇಳಿದ್ದಾರೆ.

“ ” ಈ ಚಿಹ್ನದೊಳಗಿನ ಮಾತು ನಮ್ಮವಲ್ಲ; ಮಂದಿಯವು. ಅದಕ್ಕಾಗಿ ಅವುಗಳನ್ನು ಆ ಗುರುತಿನಲ್ಲಿ ಬರೆದಿದೆ.

**(೪೧) ನಾವು ಮಾತಾಡುವಾಗ ಮಂದಿಯ ಮಾತನ್ನು ಅವರು ಆಡಿದಂತೆಯೇ ಬಳಸಿಕೊಳ್ಳುತ್ತೇವೆ. ಅವು ಮಂದಿಯ ಮಾತು ಎಂದು ತೋರುವದಕ್ಕೆ ಅವುಗಳನ್ನು “ ” ಈ ಚಿಹ್ನಗಳ ನಡುವೆ ಬರೆಯುತ್ತಾರೆ. ಇದು ಅವತರಣ ಚಿಹ್ನ. (ಅವತರಣ— ಇದ್ದಕ್ಕಿದ್ದಂತೆ ಇಳಿಸಿಕೊಳ್ಳುವುದು.)**

**ಉದ್ಗಾರ ಚಿಹ್ನ !**

(ಅ) ಅಯ್ಯೋ! ನಾನು ಕೆಟ್ಟೆ! (ಆ) ಭಾಪು! ಬಹಳ ಜಾಣನಪ್ಪ ನೀನು! (ಇ) ಥೂ! ಸರಿ ಆ ಕಡೆಗೆ!

‘ ಅ ’ ವಾಕ್ಯ ಮನಸ್ಸಿನ ದುಃಖವನ್ನು ಹೇಳುತ್ತಿದೆ. ‘ ಆ ’ ವಾಕ್ಯ ಮನಸ್ಸಿನ ಹರುಷವನ್ನು ತಿಳಿಸುತ್ತಿದೆ. ‘ ಇ ’ ವಾಕ್ಯ ಮನಸ್ಸಿನ ಬೇಸರಿಕೆಯನ್ನು ಸೂಚಿಸುತ್ತದೆ

ದುಃಖ, ಹರುಷ, ಬೇಸರಿಕೆ, ಸಿಟ್ಟು, ಹೊಗಳಿಕೆ, ಹರಕೆ ಇವೆಲ್ಲ ಮನಸ್ಸಿನ ಸ್ಥಿತಿಗಳು, ಎಂದರೆ ಭಾವಗಳು. ಈ ಭಾವಗಳನ್ನು ತಿಳಿಸುವ ವಾಕ್ಯಗಳ ಮುಂದೆ (!) ಹೀಗೆ ಗುರುತು ಹಾಕುತ್ತಾರೆ. ಈ ಭಾವಗಳನ್ನೇ ‘ ಉದ್ಗಾರ ’ ಎಂದೂ ಹೇಳುತ್ತಾರೆ.

(೪) ಮನಸ್ಸಿನ ಭಾವವನ್ನು ಎಂದರೆ ಉದ್ಗಾರವನ್ನು ತಿಳಿಸುವ ವಾಕ್ಯಗಳ ಅಥವಾ ಶಬ್ದಗಳ ಮುಂದೆ (!) ಈ ಚಿಹ್ನವನ್ನು ಬಳಸುತ್ತಾರೆ. ಇದು ಭಾವಬೋಧಕ ಅಥವಾ ಉದ್ಗಾರವಾಚಕ ಚಿಹ್ನ. (ಭಾವಬೋಧಕ–ಮನಸ್ಸಿನ ಸ್ಥಿತಿಯನ್ನು ತಿಳಿಸುವ (;) ಉದ್ಗಾರ ವಾಚಕ (ಮನಸ್ಸನ್ನು ಆಡಿತೋರಿಸುವ) ಈ ಮಾತುಗಳನ್ನು ಆ ಆ ಭಾವನೆಗಳಿಗೆ ತಕ್ಕಂತೆ ಬೇರೆಬೇರೆ ಏರಿಳಿತದ ದನಿಯಿಂದ ಆಡಬೇಕು.

## ಬಳಕೆ

(೧) ಕೆಳಗಿನ ಪರಿಚ್ಛೇದದಲ್ಲಿ ತಕ್ಕ ವಿರಾಮಚಿಹ್ನಗಳನ್ನು ತುಂಬಿರಿ.



ಮಕ್ಕಳೇ ಈ ಚಿತ್ರ ಯಾರದು ಗೊತ್ತಿದೆಯೇ ಪಂಡಿತ ಜವಾಹರ ಲಾಲ ನೆಹರು ಅವರದು ಅವರು ಈಗ ನಮ್ಮ ದೇಶದ ಮುಖ್ಯ ಮಂತ್ರಿಗಳಾಗಿದ್ದಾರೆ ಅವರನ್ನು ಭಾರತದ ಜೀವ ಎಂದರೂ ಸಲ್ಲುವಂತಿದೆ ಅಹಾ ಅವರು ಮನೆತನದಿಂದ ಎಂತಹ ದೊಡ್ಡ ಸಿರಿವಂತರು ಆದರೆ ಅವರು ನಮಗಾಗಿ ಎಷ್ಟು ಕಷ್ಟಪಡುತ್ತಾರೆ ಅವರಲ್ಲಿ ಎಳ್ಳಷ್ಟೂ ಸೊಕ್ಕಿಲ್ಲ ನಾನು ನಿಮ್ಮ ದೊರೆಯಲ್ಲ ನಿಮ್ಮೆಲ್ಲರ ಆಳು ನನ್ನನ್ನು ಸರಿಯಾಗಿ ದುಡಿಸಿಕೊಳ್ಳಿರಿ ಎಂದು ಅವರು ನಮಗೆ ಹೇಳುತ್ತಾರೆ ಎಂತಹ ತಿಳಿಯಾದ ಮನಸ್ಸು ಅವರದು ದೇವರು ಅವರನ್ನು ಬಹುಕಾಲ ಬದುಕಿಸಲಿ

## ಕೇಳಿಕೆ

(೨) ವಿರಾಮಚಿಹ್ನಗಳೆಂದರೇನು ? ಅವುಗಳನ್ನು ಎಲ್ಲಿ ಬಳಸುತ್ತಾರೆ ?
(೩) ಪೂರ್ಣವಿರಾಮ ಚಿಹ್ನವೆಂದರೇನು ? ಅದು ಯಾವುದು ?
(೪) ಪ್ರಶ್ನಚಿಹ್ನವೆಂದರೇನು ? ಅದು ಯಾವುದು ?
(೫) ಅವತರಣ ಚಿಹ್ನವೆಂದರೇನು ? ಅದು ಯಾವುದು ?
(೬) ಉದ್ಗಾರವಾಚಕ ಚಿಹ್ನವೆಂದರೇನು ? ಅದು ಯಾವುದು

# ಪ್ರಕಾಶಕರ ಅರಿಕೆ

ಬೆಳೆಯುತ್ತಿರುವ ಕನ್ನಡ ನುಡಿಗೆ ತಕ್ಕ ವ್ಯಾಕರಣವನ್ನು ಪ್ರಸಿದ್ಧಿಸಬೇಕೆಂದು ಬಹು ದಿವಸಗಳ ಬಯಕೆ ಇತ್ತು. ಅದಕ್ಕೆ ತಕ್ಕಂತೆ ಪ್ರೊ. ಶಿ. ಶಿ. ಬಸವನಾಳ, ಎಮ್. ಎ. ಅವರೂ ಪಂಡಿತ ಕವಲಿ ಅವರೂ ನಮಗೆ 'ಕನ್ನಡ ಚೆನ್ನುಡಿ' ಎಂಬ ಹೆಸರಿನಿಂದ ಎಲ್ಲ ತರಗತಿಗಳಿಗೂ ೧೯೪೫ನೆಯ ಅಭ್ಯಾಸ ಪತ್ರಿಕೆಯ ಅನುಸಾರವಾಗಿ ಬರೆದು ಕೊಟ್ಟರು.

ವ್ಯಾಕರಣ ವಿಷಯ ಅತ್ಯಂತ ತೊಡಕಿನದು; ಕೆಲವರ ಅಭಿಪ್ರಾಯದಂತೆ ನೀರಸವಾದುದು. ಅದನ್ನು ಸುಲಭವಾಗಿಯೂ ಸರಸವಾಗಿಯೂ ಮಾಡುವುದಕ್ಕೆ ಚಿತ್ರಗಳ ಅವಶ್ಯಕತೆಯೆನಿಸಿತು. ಈ ವರೆಗಿನ ಯಾವ ವ್ಯಾಕರಣಗಳಲ್ಲಿಯೂ ಚಿತ್ರಗಳ ಮೂಲಕ ಈ ವಿಷಯದ ಸುಗಮತೆಗೆ ಸಹಾಯ ಮಾಡಿದಂತಿಲ್ಲ ನಾವೀಗ ಸಾಧ್ಯವಿದ್ದ ಮಟ್ಟಿಗೂ ಈ ಕನ್ನಡ ಚೆನ್ನುಡಿಯ ಎಲ್ಲ ಹೊತ್ತಗೆಗಳಲ್ಲಿಯೂ ಚಿತ್ರಗಳನ್ನು ಸೇರಿಸಿದ್ದೇವೆ. ಅವುಗಳ ಸಾಹಾಯ್ಯದಿಂದಲೂ ವಿದ್ವಜ್ಜನರ ವಿಷಯ ನಿರೂಪಣೆಯಿಂದಲೂ ವಿಷಯ ಗ್ರಹಣಕ್ಕೆ ಸುಲಭವಾದೀತೆಂದು ನಂಬಿದ್ದೇವೆ.

ಈ ಹೊತ್ತಿಗೆಗಳು ಸಿದ್ಧವಾಗುವುದಕ್ಕೆ ಕಾರಣರಾದ ಮೂಲ ಲೇಖಕರಿಗೂ ಸೂಚನೆ ಸಲಹೆಗಳನ್ನಿತ್ತ ಮಹನೀಯರಿಗೂ, ಅಚ್ಚುಕರಡುಗಳನ್ನು ಬರೆಯುವ, ಕಚ್ಚಾ ಕರಡುಗಳನ್ನು ತಿದ್ದುವ ಕೆಲಸಗಳಲ್ಲಿ ನೆರವಾದ ಶ್ರೀ. ಚಿ. ಚೆ. ಹಿರೇಮಠ ಸೇವಾನಿವೃತ್ತ ಶಿಕ್ಷಕರು ಧಾರವಾಡ ಮತ್ತು ಶ್ರೀ. ಕೋ. ಸಿ. ಪಾಟೀಲ ಗುರುಗಳು ಪ್ರಾಕ್ಟಿಸಿಂಗ್ ಸ್ಕೂಲ, ಧಾರವಾಡ ಇವರಿಗೂ, ಅಂದವಾಗಿ ಮುದ್ರಿಸಿದ ರವೀಂದ್ರ ಮುದ್ರಣಾಲಯದ ಒಡೆಯರು ಧಾರವಾಡ ಇವರಿಗೂ, ಚಿತ್ರಕಾರ ಶ್ರೀ. ಜೀವೋತ್ತಮ ಮಂಗಳೂರು, ಶ್ರೀ. ಮೂರ್ತಿ ಧಾರವಾಡ ಇವರಿಗೂ ಅಚ್ಚುಪಡೆಗಳನ್ನೊದಗಿಸಿದ ಶ್ರೀನಿವಾಸ ಮತ್ತು ಕಂಪನಿಯವರಿಗೂ ಧನ್ಯವಾದಗಳು.

ಈ ಹೊತ್ತಗೆಗಳಲ್ಲಿ ಅವಶ್ಯವಾಗಿ ಆಗಬೇಕಾದ ಮಾರ್ಪಾಟುಗಳನ್ನು ಸಹೃದಯರು ಸೂಚಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸುವೆವು.

ಪುಸ್ತಕಗಳನ್ನು ಕೊಳ್ಳುವುದಕ್ಕೆ ಎಲ್ಲರಿಗೂ ಅನುಕೂಲವಾಗಲೆಂದು ಎಲ್ಲ ತರಗತಿಗಳಿಗೂ ಬೇರೆಬೇರೆಯಾಗಿಯೇ ಮಾಡಿದೆ. ಎಲ್ಲ ಶಾಲಾಗುರುಗಳೂ ವ್ಯಾಪಾರಿ ಬಂಧುಗಳೂ ನಮ್ಮೊಡನೆ ಸಹಕರಿಸಬೇಕಾಗಿ ಬೇಡಿಕೆ—

ತಮ್ಮೆಲ್ಲರ

ಕೈ. ಶಿವರುದ್ರಪ್ಪ ಸೋಮಪ್ಪ ಕುಲಕರಣಿ

(ಗೌರೀಶಂ)

ಗೌರೀಶ ಗ್ರಂಥಪ್ರಕಟನಾಲಯದಿಂದ
ಪ್ರಸಿದ್ಧವಾಗಿರುವ

# ಪುಸ್ತಕಗಳು

೧. ಕನ್ನಡ ಚೆನ್ನುಡಿ ೪ನೆಯ ತರಗತಿಗೆ

೨. ,, ಭಾಗ ೧ (೫ನೆಯ ತರಗತಿಗೆ)

೩. ,, ,, ೨ (೬ನೆಯ ತರಗತಿಗೆ)

೪. ,, ,, ೩ (೭ನೆಯ ತರಗತಿಗೆ)

ಪ್ರಕಾಶಕರು:
ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ
ಧಾರವಾಡ

ಮುದ್ರಕರು: